Photo by S. L. Karwa



ಬಹುಮಾನ
ಪಡೆದ ಶೀರ್ಷಿಕೆ

ಧನವಿದ್ದರೇ ಜಗತ್ತುಂಟಮ್ಮ
ದಯಮಾಡು !

ಕಳಿಸಿದವರು:
ಹೆಚ್. ಸರೋಜ

# ಚಂದಮಾಮ

ಈ ಸಂಚಿಕೆಯಲ್ಲಿ



ಅಲ್ಲದೆ ಇಂದ್ರಜಾಲ, ಪದ್ಯಗಳು, ವಾರ್ತೆಗಳು - ವಿಶೇಷಗಳು ಎಲ್ಲಾ ಇವೆ.

ಅಂಜಲಿ ದೇವಿ ಯಾವಾಗಲೂ

# ಲಕ್ಸ್ ಟಾಯಿಲೆಟ್ ಸೋಪು

ಉಪಯೋಗಿಸುತ್ತಾಳೆ

"— ಇಷ್ಟು ಬಿಳಿಯಾದ, ಇಷ್ಟು ಶುದ್ಧವಾದ ಸೋಪು ಇದೊಂದೇ ಎಂದು ತಿಳಿದಿದ್ದೇನೆ."

ನೀವು ಅವಳ ಮಾತಿನಲ್ಲಿ ವಿಶ್ವಾಸವಿಡಬಹುದು: ಲಕ್ಸ್ ಟಾಯಿಲೆಟ್ ಸೋಪಿನ ಅಚ್ಚ ಬಿಳುಪು ಅದರ ಶುದ್ಧತೆಯನ್ನು ತೋರಿಸುತ್ತದೆ— ಮತ್ತು ಅದರಿಂದ ಸೌಮ್ಯ ರೀತಿಯಲ್ಲಿ ನಿಮ್ಮ ಸೌಂದರ್ಯರಕ್ಷಣೆಯಾಗುತ್ತದೆ! ಮತ್ತು ಲಕ್ಸ್‌ನ ನೊರೆಯೋ! ಕೆನೆಯಂತಹ ಮತ್ತು ಸುವಾಸನೆಯುಳ್ಳ ಆ ನೊರೆ ಚರ್ಮವನ್ನು ಸಂಪೂರ್ಣವಾಗಿ ನಿರ್ಮಲಗೊಳಿಸಿ ಅದು ಮೃದು ಮತ್ತು ಆಕರ್ಷಕವಾಗುವಂತೆ ಮಾಡುತ್ತದೆ. ಮತ್ತು ಮಿತವ್ಯಯಕ್ಕೆ ದೊಡ್ಡ ಸೈಜಿನ ಸೋಪನ್ನು ಮರೆಯಬೇಡಿ!

ಭಾರತದಲ್ಲಿ ತಯಾರಿಸಲ್ಪಟ್ಟಿದೆ




ಸಿನೆಮ ತಾರೆಯರ ಸೌಂದರ್ಯದ ಸೋಪು

LTS. 485-50 KN



ತಾಯಿಯ ಅತ್ಯುತ್ತಮ ಗೆಳೆಯ!
ಅಯ್ಯೋ ಪಾಪ! ಮಗುವಿಗೆ ಮತ್ತೆ ನೆಗಡಿ!
ನಾಮೋ ನನ್ನ ಕೀಲುನೋವೋ! ಇಂದು ಆಫೀಸಿಗೆ ಹೋಗಲಾಗುವುದಿಲ್ಲ!
ಅಮ್ಮಾ! ನನ್ನಕಾಲು ಉಳುಕಿದೆ! ನಾನಿಂದು ಪಂದ್ಯದಲ್ಲಿ ಆಡುವುದು ಹೇಗೆ?




ಡಾಕ್ಟರರಲ್ಲಿ...
ಅಲ್ಲ! ಇದು ತಲೆಸಿಡಿತಗಳಿಗೆ ಮಾತ್ರ ಅಲ್ಲ ಲಿಟಲ್ಸ್ ಓರಿಯಂಟಲ್ ಬಾಮ್ ಉಳುಕುಗಳಿಗೆ ಕೀಲುನೋವುಗಳಿಗೆ ಇತರ ಮಾಂಸಖಂಡಗಳ ನೋವುಗಳಿಗೆ ಬಹಳ ಒಳ್ಳೆಯದು! ಇದು ಶೀತ ಮತ್ತು ಕೆಮ್ಮುಗಳಿಗೆ ವಿಶೇಷವಾಗಿ ಒಳ್ಳೆಯದು!




ಎಷ್ಟು ಬೇಗನೆ ಎಲ್ಲ ಗುಣವಾಯಿತು! ಓರಿಯಂಟಲ್ ಬಾಮ್ ನಿಂದಾಗಿ!
ಹೌದು ನನ್ನ ಊಟವನ್ನು ಸಿದ್ಧಪಡಿಸು! ನಾನಿದೋ ಆಫೀಸಿಗೆ ಹೊರಡುತ್ತೇನೆ!
ಇಂದಿನ ಪಂದ್ಯದಲ್ಲಿ ನನಗೆ ಜಯವನ್ನು ಬಯಸು ಅಪ್ಪಾ!




ಯಾವ ಕುಟುಂಬದಲ್ಲೂ ಲಿಟಲ್ಸ್ ಓರಿಯಂಟಲ್ ಬಾಮ್ ಇಲ್ಲದಿರಬಾರದು!
ಲಿಟಲ್ಸ್ ಓರಿಯಂಟಲ್ ಬಾಮ್
ಶೀತ, ಸಿಡಿತ ಮತ್ತು ನೋವುಗಳಿಗೆ



# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

ಹೊಸ ವಿಸ್ತೃತ ಮೈಸೂರಿನಲ್ಲಿ ಒಂದಾಗಿ ಕೂಡಿರುವ ಕನ್ನಡ ಬಾಂಧವರಿಗೆಲ್ಲಾ ಹೊಸ ವರುಷ ೧೯೫೨ ರ ಶುಭಾಶಯಗಳನ್ನು ಕಳುಹಿಸುತ್ತಾನೆ ನಿಮ್ಮ ಮೆಚ್ಚಿನ ಚಂದಮಾಮ. 'ನಾವೆಲ್ಲಾ ಒಂದಾಗಿ, ನಮ್ಮ ನಡು ಚಂದಮಾಮ ಮಾತ್ರ ಮದರಾಸಿನಲ್ಲೇ ಇರಬೇಕೇಕೆ? ನಮ್ಮ ನಡು ವೆಯೇ ಮೂಡಿಕೊಂಡಿರಬಾರದೇ' ಎಂದು ಅನೇಕರು ಕೇಳಿ ಕರೆಯು ತ್ತಿದ್ದಾರೆ. ಇವನು ಹುಟ್ಟಿದ್ದು, ಬೆಳೆದದ್ದು ಇಲ್ಲಿಯೇ; ಅನೇಕ ಭಾಷಾಬಾಂಧವರೊಂದಿಗೆ ಇಲ್ಲಿಯೇ ಮೂಡಿ ಬೆಳಗುತ್ತಾನೆ. ಇಲ್ಲಿಯ ಭಾಷಾಬಾಂಧವ್ಯದ ಒಗ್ಗಟ್ಟನ್ನು ಹರಿದುಕೊಂಡು ನಿಮ್ಮೆಡೆಗೆ ಬರಲು ಚಂದಮಾಮನಿಗೆ ಸಾಧ್ಯವಿಲ್ಲ. ದೂರದಲ್ಲಿದ್ದು ತಿಂಗತಿಂಗಳೂ ನಿಮ್ಮೆಡೆಗೆ ಓಡೋಡಿ ಬರುವುದರಲ್ಲೇ ಚಂದಮಾಮನಿಗೆ ಆನಂದ. ನೀವೆಲ್ಲಾ ಒಗ್ಗಟ್ಟಾಗಿ ಬಾಳಿ, ಬೆಳಗಬೇಕೆಂದು ಒಗ್ಗಟ್ಟಿನ ಬಲದಲ್ಲೇ ನಿಂತು ಚಂದಮಾಮ ಹರಸುತ್ತಾನೆ. ನಿಮ್ಮ ಪ್ರೇಮವನ್ನು ಕುಡಿದು ಚಂದ ಮಾಮ ಈಗ ಸ್ವಲ್ಪ ಉಬ್ಬಿದ್ದಾನೆ ಅಲ್ಲವೆ? ಆ ಉಬ್ಬಿನಲ್ಲಿ ನಿಮಗೂ ಒಂದು ಹಬ್ಬ. ಹಬ್ಬವಾಗಲಿ, ತುಂಬಾ ಹಬ್ಬವಾಗಲಿ ನಿಮಗೆ! ಹೊಸ ನಾಡು ಗಡಿಮೇರೆಗಳನ್ನು ಪಡೆದ ನೀವು ಸಂತೋಷದಿಂದಲೋ ಹೆಮ್ಮೆ ಯಿಂದಲೋ ಕರ್ತವ್ಯ ಕಾರ್ಯಗಳನ್ನು ಮರೆಯಬಾರದು. ನಾಡಿನ ಒಳ್ಳೆಯ ಭವಿಷ್ಯದ ಚಿಂತನೆ ಯಾವಾಗಲೂ ನಿಮ್ಮ ಮನಸ್ಸಿನಲ್ಲಿರಲಿ. ನಾಡಿನ ಮೇಲ್ಮೆಗಾಗಿ ನಿಮ್ಮಿಂದಾಗುವ ಸೇವೆಯನ್ನು ಸಲ್ಲಿಸಲು ಎಂದೂ ಹಿಂಜರಿಯಬೇಡಿ. ನಿಮಗೆಲ್ಲರಿಗೂ ಮೇಲುಮೇಲಾಗಲಿ!

ಸಂಚಿಕೆ ೧

ಜನವರಿ ೧೯೫೨

ಸಂಪುಟ ೩

CHITRA

# ಮು ಖ ಚಿ ತ್ರ

**ಪಾಂ**ಡವರು ಅರಣ್ಯವಾಸದಲ್ಲಿರುವಾಗ ಮಾರ್ಕಂಡೇಯ ಮುನಿಗಳು ಅವರಬಳಿಗೆ ಬಂದು ಅನೇಕ ಕಥೆಗಳನ್ನು ಹೇಳುತ್ತಿದ್ದರು. ಒಮ್ಮೆ ಧರ್ಮರಾಯನು "ಮಹಾತ್ಮರೆ, ಪರಮ ಸಾಧ್ವಿಯಾದ ದ್ರೌಪದಿ ನಮ್ಮೊಂದಿಗೆ ಬಂದು ಬಹಳ ಕಷ್ಟಪಡುತ್ತಿದ್ದಾಳಲ್ಲವೆ? ಹಿಂದೆ ಯಾವ ಪತಿವ್ರತೆಯಾದರೂ ಹೀಗೆ ಕಷ್ಟಪಟ್ಟಿರುವಳೆ?" ಎಂದು ಕೇಳಲು ಮಾರ್ಕಂಡೇಯರು ಸಾವಿತ್ರೀ ಸತ್ಯವಾನರ ಕಥೆಯನ್ನು ಹೇಳಿದರು.

ಹಿಂದೆ ಮದ್ರದೇಶವನ್ನು ಅಶ್ವಪತಿಯೆಂಬ ರಾಜನು ಆಳುತ್ತಿದ್ದ. ಅವನಿಗೆ ಮಕ್ಕಳಿಲ್ಲ. ಆದರಿಂದ ಆತ ಎಡೆಬಿಡದ ಹದಿನೆಂಟು ವರ್ಷ ಸಾವಿತ್ರೀದೇವಿಯನ್ನು ಆರಾಧನೆ ಮಾಡಿದ. ಸಾವಿತ್ರಿದೇವಿ ಪ್ರತ್ಯಕ್ಷಳಾಗಿ "ರಾಜರ್ಷಿ, ನಿನ್ನ ಆರಾಧನೆಗೆ ಮೆಚ್ಚಿದೆ. ಏನು ವರ ಬೇಕೋ ಕೇಳು" ಎಂದಳು. "ತಾಯಿ, ನನಗೆ ಕುಮಾರನನ್ನು ಕರುಣಿಸು" ಎಂದು ಬೇಡಿದ ರಾಜ. "ಅಪ್ಪಾ, ನಾನು ನಿನ್ನ ಬಯಕೆಯನ್ನು ಮೊದಲೇ ತಿಳಿದಿದ್ದೆ. ಅಂತೆಯೇ ಬ್ರಹ್ಮನಬಳಿಗೆ ಹೋಗಿ ನಿನ್ನ ಸಂಗತಿ ಕೇಳಿದೆ. ನಿನಗೆ ಒಬ್ಬಳು ಮಗಳನ್ನು ಮಾತ್ರವೇ ಕೊಡಬಹುದೆಂದು ಆತ ಹೇಳಿದ. ದೊಡ್ಡವರು ಕೊಡುವುದನ್ನು ಬೇಡೆನ್ನಬಾರದು. ನೀನು ಒಬ್ಬಳು ಮಗಳನ್ನು ಪಡೆದು ತೃಪ್ತನಾಗು" ಎಂದಳು ಸಾವಿತ್ರೀದೇವಿ.

ತರುವಾಯ ಅಶ್ವಪತಿಯ ಪತ್ನಿ ಮಾಳವಿ ಬಸಿರಾಗಿ ಸಕಾಲದಲ್ಲಿ ಹೆಣ್ಣು ಶಿಶುವನ್ನು ಹೆತ್ತಳು. ಸಾವಿತ್ರಿಯ ವರದಿಂದ ಹುಟ್ಟಿದ ಮಗಳಾದುದರಿಂದ ಅಶ್ವಪತಿ ಮಗಳಿಗೆ ಸಾವಿತ್ರಿ ಎಂದೇ ಹೆಸರಿಟ್ಟ. ಸಾವಿತ್ರಿ ಕ್ರಮವಾಗಿ ಬೆಳೆದು ದೊಡ್ಡವಳಾಗುತ್ತಾ ಬಂದಂತೆ ಅವಳ ಅಂದಚೆಂದಗಳೂ ಹೆಚ್ಚಿದುವು. ಅವಳ ಸೌಂದರ್ಯದ ತೇಜಸ್ಸನ್ನು ನೋಡಿದ ಪ್ರಜೆಗಳು ಅವಳು ಮಾನವಪುತ್ರಿಯಲ್ಲವೆಂದು ದೇವತೆಯೇ ಮಾನವರೂಪದಲ್ಲಿ ಅವತರಿಸಿದ್ದಾಳೆಂದೂ ಅಂದುಕೊಂಡರು. ಅವಳು ಮದುವೆಯ ವಯಸ್ಸಿಗೆ ಬಂದಾಗ ಯಾವ ರಾಜಕುಮಾರನೂ ಅವಳನ್ನು ವರಿಸಲು ಮುಂದೆನಿಲ್ಲುವ ಸಾಹಸಮಾಡದೇ ಹೋದನು.

ಹೀಗಿರಲೊಂದು ದಿನ ಸಾವಿತ್ರಿ ಸ್ನಾನಮಾಡಿ ಸಾವಿತ್ರೀದೇವಿಗೆ ಪೂಜೆಮಾಡಿ ತಂದೆಯ ಬಳಿಗೆ ಹೋದಾಗ ಆತ ಚಿಂತೆಯಿಂದಿದ್ದ. "ಏಕೆ ಚಿಂತಿಸುವಿರಿ ಅಪ್ಪಾ" ಎಂದು ಕೇಳಿದಳು. "ಮಗಳೇ, ನಿನ್ನ ಮದುವೆ ಕುರಿತೇ ಚಿಂತೆಮಾಡುತ್ತೇನೆ. ಯಾರೂ ನಿನ್ನನ್ನು ವರಿಸಲು ಮುಂದೆ ಬರುವುದಿಲ್ಲವಲ್ಲಾ! ಇನ್ನು ನೀನೇ ನಿನಗೆ ತಕ್ಕ ಗಂಡನನ್ನು ಹುಡುಕಿ ನೋಡಿಕೋ. ನೀನಾರಿಸುವವನಿಗೆ ನಿನ್ನನ್ನು ಕೊಟ್ಟು ನನ್ನ ಕರ್ತವ್ಯ ನೆರವೇರಿಸಿಕೊಳ್ಳುತ್ತೇನೆ. ಯುಕ್ತವಯಸ್ಸಿನ ಮಗಳಿಗೆ ಮದುವೆ ಮಾಡದ ನಿಂದೆ ನನಗೆ ಬಾರದಂತೆ ನೋಡಿಕೋ ಅಮ್ಮಾ!" ಎಂದ ಅಶ್ವಪತಿ.

## ಶುಚಿತ್ವ

ಚಿಣ್ಣರೆ ಕೇಳಿರಿ
ಎಲ್ಲರು ಕೂಡುತ
ಮನೆಯನು ಶುಚಿಯಿಡಿರಿ ।
ಸುತ್ತಲು ತುಂಬಿದ
ಕೊಳೆಕಸವೆಲ್ಲವ
ನಿತ್ಯಲು ತೆಗೆಯುತಿರಿ ।
ಕೂಡಿಡೆ ಕೊಳೆ ಕಸ
ವಲ್ಲಿಯೆ ಕೊಳೆಯುತ
ಮಾಡುವುದದು ಕೆಡುಕು ।
ರೋಗದ ಅಣುಗಳು
ಅಲ್ಲಿಯೆ ಹುಟ್ಟುತ
ರೋಗವ ಹಬ್ಬುವುವು ।
ಅತ್ತಲು ಇತ್ತಲು
ಎತ್ತಲು ಶುಚಿಯಿರೆ
ಉತ್ತಮವದು ನಿಜವು ।
ರೋಗದ ಪೀಡೆಯು
ಇಲ್ಲದೆ ಜೀವನ
ಸಾಗಲಾಗಳೇ, ಸುಖವು ।
'ಆರೋಗ್ಯವೆ ಭಾ
ಗ್ಯ'ವು ನಿಜಮಾತಿದು
ಭಾರತ ವೀರರಿರಾ! ।
ಮನೆಯ ವಠಾರವ
ಶುಚಿಯಾಗಿಡೆ ನೀವ್
ದಿನದಿನ ದುಡಿಯುವಿರಾ?

"ಕಾಶನಾಭ" ಮಾಯಿಪ್ಪಾಡಿ

## ಮೋಹನ

ದಿನವು ಮನೆಯ ಬೆಳಗುತಿರುವ
ನನ್ನ ತಮ್ಮ ಮೋಹನ ॥
ಬೆಳಗೆ ಬೆಳಕು ಹರಿವಮುನ್ನ
ಹಲ್ಲು ಮುಖವ ತೊಳೆವನು ॥
ದಿನದಸ್ವಚ್ಛ ಗೃದ ಮೇಲೆ
ದೇವರಿಂಗೆ ಮಣಿವನು ॥
ನಾಡನುಡಿಯ ಹಾಡಹಾಡಿ
ಮನೆಗೆ ಮಂಗಳೆನಿಸುವನು ॥
ಮನೆಯ ಕೋಪಿ, ಲೆಕ್ಕಬರಹ
ಮಾಡಲಾತ ಮರೆಯನು ॥
ತಂದೆ ತಾಯಿ ಗುರುಗಳೆಂದ
ಹಿತದ ನುಡಿಯ ಮೀರನು ॥
ಗೆಳೆಯರಲ್ಲಿ ಬಳಗದಲ್ಲಿ
ಕೋಪವನ್ನೆ ಮಾಡನು ॥
ಶಾಲೆಯಲ್ಲಿ ಶಿಸ್ತಿಗೆಂದು
ಕುಂದ ನೆಸಗಲಾರನು ॥
ತಿಂಡಿ ತಿನಸಿಗೆಂದು ಹಟವ
ಮಾಡಿ ಮುನಿಸು ಗೊಳ್ಳನು
ಇದ್ದ ತಿಂಡಿ ಹಂಚಿ ತಿನುವ
ನೀತಿಯರಿತ ಜಾಣನು ॥
ಬೆಳಗಲಿನ್ನು ಕಾಲಕಾಲ
ಅವನ ನಿತ್ಯ ಜೀವನ
ಪ್ರೇಮ ಸ್ಫೂರ್ತಿ ಪುಣ್ಯ ಕೀರ್ತಿ
ಹಬ್ಬಲವನೆ, ಪಾವನ! ॥

ಅ. ರ. ಅರಸಳಿಕೆ




ಬ್ರಹ್ಮದತ್ತನು ಕಾಶೀರಾಜ್ಯವನ್ನು ಪರಿಪಾಲಿಸುತ್ತಿದ್ದಾಗ ಬೋಧಿಸತ್ವನು ಕಾಶಿರಾಜನ ಮಗನಾಗಿ ಜನ್ಮತಾಳಿದನು. ಆತನು ತಕ್ಷಶಿಲೆಗೆ ಹೋಗಿ, ಹದಿನಾರು ವರ್ಷ ತುಂಬುವುದರೊಳಗಾಗಿ ಸಮಸ್ತ ಶಾಸ್ತ್ರ ಪುರಾಣಗಳನ್ನು ಕಲಿತನು. ತಂದೆ ತೀರಿಕೊಂಡ ನಂತರ ಕಾಶಿದೇಶದ ಅರಸನಾಗಿ, ಧರ್ಮಕ್ಕೆ ಚ್ಯುತಿ ಬಾರದಂತೆ ರಾಜ್ಯಭಾರ ಮಾಡುತ್ತಿದ್ದನು.

ಆತನ ಆಳ್ವಿಕೆಯಲ್ಲಿ ಪ್ರಜೆಗಳು ಸುಖ ಶಾಂತಿಗಳಿಂದ ಜೀವಿಸುತ್ತಿದ್ದರು. ಅಂತಲೇ ನ್ಯಾಯಾಸ್ಥಾನವು ಹಾಳುಬಿದ್ದಂತಿತ್ತು.

ಪ್ರಜೆಗಳಲ್ಲಿ ಯಾವ ಆಂದೋಳನ ವಿರಲಿಲ್ಲವಾದುದರಿಂದ ರಾಜನಿಗೆ ತನ್ನಿಂದ ಆಗಿರಬಹುದಾದ ಲೋಪದೋಷಗಳ ವಿಷಯ ತಿಳಿಯುತ್ತಿರಲಿಲ್ಲ. ಕಡೇಪಕ್ಷ ತನ್ನ ಆಸ್ಥಾನಕ್ಕೆ ಬಂದು ಹೋಗುವವರಿಂದಲಾದರೂ ಈ ಕುಂದು ಕೊರತೆಗಳ ವಿಷಯ ತಿಳಿಯಬಹುದೆಂದು ಭಾವಿಸಿದ್ದನು. ಆದರೆ ದೂರುಹೊತ್ತುಕೊಂಡು ಆಸ್ಥಾನಕ್ಕೆ ಬರುತ್ತಿದ್ದವರೂ ವಿರಳ.

ಆದುದರಿಂದ ಒಂದು ದಿನ ರಾಜನು ರಥವನ್ನೇರಿ ಕಾಶಿನಗರದಲೆಲ್ಲಾ ಸುತ್ತಾಡಿ, ಕಣ್ಣಿಗೆ ಕಾಣಿಸಿದವರನ್ನು ಕುರಿತು "ನನ್ನ ಪರಿಪಾಲನೆಯಲ್ಲಿ ನಿಮಗೇನು ಲೋಪದೋಷಗಳು ಕಾಣಿಸುತ್ತಿವೆ" ಎಂದು ಕೇಳಲಾರಂಭಿಸಿದನು. ಆದರೆ ಯಾರನ್ನು ಕೇಳಿದರೂ ಅವರು ಕೊಡುತ್ತಿದ್ದ ಉತ್ತರ ಒಂದೇ ಒಂದು. "ನಿಮ್ಮ ಪರಿಪಾಲನೆಯಲ್ಲಿ ನಾವೆಲ್ಲಾ ಸುಖಗಳಾಗಿರುವೆವು. ಮಹಾಪ್ರಭು, ನಮಗೆ ಯಾವ ಲೋಪವೂ ಉಂಟಾಗಿಲ್ಲ" ಎಂದು ಹೇಳುತ್ತಿದ್ದರು.

ಆಗಲೂ ರಾಜನಿಗೆ ತೃಪ್ತಿಯುಂಟಾಗಲಿಲ್ಲ. ಆತನು ಸಾಮಾನ್ಯ ಪೋಷಾಕನ್ನು ಧರಿಸಿ ರಥವನ್ನೇರಿ ಹಳ್ಳಿಗಳಿಗೆ ಹೊರಟ.

ಎಷ್ಟು ಗ್ರಾಮಗಳಿಗೆ ಹೋದರೂ ಕಾಶಿರಾಜನನ್ನು ಕುರಿತು ಯಾರೊಬ್ಬರೂ ಆಕ್ಷೇಪಣೆ ಮಾಡಲಿಲ್ಲ. ಆದರೆ ಹಾಡಿಹೊಗಳುತ್ತಿದ್ದರು. ರಥವು ರಾಜ್ಯದ ಸರಹದ್ದಿನ ಮಾರ್ಗವಾಗಿ ರಾಜಧಾನಿಗೆ ಹಿಂದಿರುಗುತಿತ್ತು. ಹೀಗೆ ಹೋಗುತ್ತಿರಲು ಕಾಶಿರಾಜನು ಹತ್ತಿದ್ದ ರಥಕ್ಕೆ ಮತ್ತೊಂದು

ರಥ ಇದಿರಾಯಿತು. ಅದೂ ದೊಡ್ಡ ರಥ. ಎರಡು ರಥಗಳು ಒಂದಕ್ಕೊಂದು ತಾಕದಂತೆ ಹೋಗಲು ಅವಕಾಶವಿರಲಿಲ್ಲ, ಸಾಧ್ಯವಿರಲಿಲ್ಲ. ಏಕೆಂದರೆ ಅದು ತುಂಬಾ ಇಕ್ಕಟ್ಟಾದ ರಸ್ತೆ. ಅದರ ಇಕ್ಕಡೆಗಳಲ್ಲೂ ಎತ್ತರವಾದ ಜಗಲಿ ಕಟ್ಟೆಗಳಿದ್ದುವು. ಎರಡು ರಥಗಳೂ ತುಸ ಅಂತರದಲ್ಲಿ ನಿಂತುಬಿಟ್ಟವು.

"ನಾನು ಮುಂದೆ ಹೋಗಬೇಕು. ನಿನ್ನ ರಥವನ್ನು ಹಿಂದಕ್ಕೆ ತಿರುಗಿಸು" ಎಂದ ಕಾಶಿ ರಾಜನ ರಥದ ಚಾಲಕ.

"ರಥವನ್ನು ಹಿಂದಕ್ಕೆ ತಿರುಗಿಸುವಂತೆ ಹೇಳಲೇನು ಅಧಿಕಾರವಿದೆ ನಿನಗೆ? ದರದು ಇದ್ದರೆ ನೀನೇ ನಿನ್ನ ರಥವನ್ನು ಹಿಂದಕ್ಕೆ ತಿರುಗಿಸಿಕೋ" ಎಂದು ಹೇಳಿದ ಎರಡನೇ ರಥವನ್ನು ನಡೆಯುಸುತ್ತಿದ್ದ ಚಾಲಕ. ಆತ ಒಪ್ಪಲಿಲ್ಲ. ಇಬ್ಬರು ಸಾರಥಿಗಳು ಚರ್ಚೆಗೆ ಇಳಿದರು. "ಈ ರಥದಲ್ಲಿರುವವರು ಯಾರು ಗೊತ್ತೆ ನಿನಗೆ? ಕಾಶಿರಾಜರಿದ್ದಾರೆ" ಎಂದು ಬೆದರಿಸಿದ ಕಾಶಿ ರಾಜನ ರಥದ ಚಾಲಕ.

"ಈ ರಥದಲ್ಲಿರುವವರು ಕೋಸಲದೇಶದರಸರು" ಎಂದು ಹೆಮ್ಮೆಯಿಂದ ಹೇಳಿದ ಎರಡನೇ ರಥದ ಚಾಲಕ.

ಕಾಶಿರಾಜ್ಯದಷ್ಟೇ ವಿಶಾಲವಾದುದು ಕೋಸಲರಾಜ್ಯ. ವಯಸ್ಸಿನಲ್ಲೂ, ವಿದ್ಯೆಯಲ್ಲೂ ಕೋಸಲದರಸನು ಕಾಶಿರಾಜನಿಗೆ ಸರಿಸಮಾನನು. ಆತನೂಸಹ ಮಾರುವೇಷದಲ್ಲಿ ತನ್ನ ರಾಜ್ಯದಲೆಲ್ಲಾ ಸುತ್ತಿ ತನ್ನ ವಿಷಯವಾಗಿ ಪ್ರಜೆಗಳಾಡಿಕೊಳ್ಳುತ್ತಿರುವ ಸಂಗತಿಗಳನ್ನು



ಗಮನಿಸಿ; ತಪ್ಪು ತಿದ್ದಿಕೊಳ್ಳಲು ಹೀಗೆ ಹೊರಟಿದ್ದ. "ನಿಮ್ಮ ರಾಜರ ಹೆಚ್ಚುಗಾರಿಕೆ ಏನು?" ಎಂದು ಕೇಳಿದ ಕಾಶಿರಾಜನ ಸಾರಥಿ. ಅದಕ್ಕೆ ಕೋಸಲದೇಶದರಸನ ಚಾಲಕನೆಂದ:

"ದಳಹಂ ದಳಹಸ್ಯ ಖಿಪತಿ ಮಲ್ಲಿಕೊ
ಮದುನಾಮುದುಲ
ಸಾಧುಂಪಿ ಸಾಧುನಾ ಜೇತಿ ಅಸಾಧುಂಪಿ
ಅಸಾಧುನಾ.
ಏತಾದಿಸೋ ಅಯಂ ರಾಜಾ ಮಗ್ಗಾ
ಉಯ್ಯಾಹಿ ಸಾರಥಿ!"

[ನಮ್ಮ ಮಲ್ಲಿಕ ಮಹಾರಾಜರು ದುಷ್ಟರಿಗೆ ದುಷ್ಟ, ಸಜ್ಜನರಿಗೆ ಸಜ್ಜನ. ಸುಗುಣವನ್ನು ಸುಗುಣದಿಂದಲೇ ಸನ್ಮಾನಿಸುತ್ತಾನೆ. ದುರ್ಮಾರ್ಗರನ್ನು ದುರ್ಮಾರ್ಗತನದಿಂದಲೇ ನಿಗ್ರಹಿಸುವನು.] ಇದನ್ನು ಕೇಳಿದ ಕಾಶಿರಾಜನ ಸಾರಥಿ ಈ ರೀತಿ ಉತ್ತರ ಕೊಟ್ಟ.

"ಅಕ್ಕೋಧೇನ ಜಿನೇ ಕೋಧಂ ಅಸಾಧುಂ
ಸಾಧುನಾ ಜಿನೇ
ಜಿನೇ ಕದರಿಯಂ ದಾನೇನ ಸಚ್ಚೇನ
ಅಲವಾದಿನಂ.
ಏತಾದಿಸೋ ಅಯಂ ರಾಜಾ ಮಗ್ಗಾ
ಉಯ್ಯಾಹಿ ಸಾರಥಿ"

[ನಮ್ಮ ಮಹಾರಾಜನು ಆಗ್ರಹವನ್ನು ಶಾಂತದಿಂದ ಜಯಿಸುವನು. ದುರ್ಮಾರ್ಗವನ್ನು ಸಾಧು ಸ್ವಭಾವದಿಂದ ಬಗ್ಗಿಸುವನು. ಬಹುಮಾನಗಳಿಂದ ಲೋಭಿಗಳನ್ನು ಸೋಲಿಸುವನು. ಸುಳ್ಳಿಗೆ ಪ್ರತಿಫಲವಾಗಿ ಸತ್ಯವನ್ನು ಕೊಡುವನು]

ಕಾಶಿದೇಶದರಸನ ರಥವನ್ನು ಓಡಿಸುವ ಚಾಲಕನು ಹೇಳಿದ ಈ ಮಾತುಗಳನ್ನು ಕೇಳಿ ದಾಕ್ಷಣ ಕೋಸಲದರಸನಾದ ಮಲ್ಲಿಕನಿಗೆ ಜ್ಞಾನೋದಯವಾಯಿತು. ತಟಕ್ಕನೆ ರಥದಿಂದಿಳಿದು ಕಾಶಿರಾಜನಿಗೆ ಪ್ರಣಾಮ ಮಾಡಿ "ಪುಣ್ಯಾತ್ಮ, ನನ್ನ ತಪ್ಪು ತಿಳಿದುಬಂತು. ಕ್ಷಮಿಸಬೇಕು. ಅದನ್ನು ಸರಿಪಡಿಸಿಕೊಂಡು, ಧರ್ಮದಿಂದ ಇನ್ನುಮುಂದೆ ರಾಜ್ಯಪರಿಪಾಲನೆ ಮಾಡುವೆನು" ಎಂದ.

ತರುವಾಯ ಕಾಶಿರಾಜ ತನ್ನ ನಗರಕ್ಕೆ ಹಿಂತಿರುಗಿ ಧರ್ಮಕ್ಕೆ ಚ್ಯುತಿ ಬರದಂತೆ ರಾಜ್ಯಭಾರಮಾಡುತ್ತಾ ಬಹುಕಾಲ ಜೀವಿಸಿದ್ದನು.





# ವಿನಾಶಕಾಲೇ ವಿಪರೀತಬುದ್ಧಿಃ

ಒಂದು ದಿನ ಒಂದು ನರಿ ಆಹಾರಕ್ಕೆ ಅಡವಿಯಲೆಲ್ಲಾ ಸಂಚರಿಸುತ್ತಿರಲು ಅದಕ್ಕೆ ಒಂದು ಭಾರಿ ಸಿಂಹ ಕಾಣಿಸಿತು.

ನರಿ ನಡುಗುತ್ತಾ ಸಿಂಹದ ಮುಂದೆ ಮೊಣಕಾಲೂರಿ "ಮಹಾಪ್ರಭು, ನನ್ನನ್ನು ಕೊಲ್ಲಬೇಡಿ. ಯಾವ ಜ್ಜೀವವೂ ನಿಮ್ಮ ಭಂಟನಾಗಿ ಸೇವೆಸಲ್ಲಿಸುವೆನು" ಎಂದಿತು.

ಸಿಂಹ ಈ ವ್ಯವಸ್ಥೆಗೆ ಒಪ್ಪಿಕೊಂಡು, ನರಿಯನ್ನು ತನ್ನ ಜತೆಯಲ್ಲಿ ಗುಹೆಗೆ ಕರೆದುಕೊಂಡುಹೋಯಿತು.

ಅಂದಿನಿಂದ ಸಿಂಹ ಗುಹೆಯಲ್ಲಿ ಮಲಗಿರುತಿತ್ತು. ಹೊರಗೆ ನರಿ ಕಾವಲಿರುತಿತ್ತು. ಯಾವುದಾದರೂ ಪ್ರಾಣಿ ಸುತ್ತುಮುತ್ತು ಕಾಣಿಸಿಕೊಂಡಕೂಡಲೇ ನರಿ ಗುಹೆಯೊಳಕ್ಕೆ ಬಗ್ಗಿನೋಡಿ "ಮಹಾಪ್ರಭು, ಸದವಕಾಶಲಭಿಸಿದೆ" ಎಂದು ಸೂಚನೆಕೊಡುವುದು.

ಸೂಚನೆ ಬಂದಕೂಡಲೇ ಸಿಂಹ ಪಕ್ಕನೆದ್ದು ಹೊರಗೆಬಂದು, ಎರಡು ಸಾರಿ ನೆಗೆದು ಆ ಪ್ರಾಣಿಯಮೇಲೆ ಬಿದ್ದು ಅದನ್ನು ಕೊಂದು ತನ್ನ ಹೊಟ್ಟೆ ತುಂಬಿಕೊಳ್ಳುತ್ತಿತ್ತು. ಸಿಂಹ ತಿಂದು ಉಳಿದುದನ್ನು ತಿಂದು ನರಿ ತನ್ನ ಹಸಿವನ್ನು ನೀಗಿಕೊಳ್ಳುತಿತ್ತು.

ಈ ರೀತಿ ನರಿಯ ಸಹಾಯದಿಂದ ಸಿಂಹ ಗುಹೆಯನ್ನು ಬಿಟ್ಟು ಹೊರಗೆಹೋಗದೆ ಸಿರಾಯಾಸವಾಗಿ ಜಂತುಗಳನ್ನು ಕೊಂದು ತಿನ್ನುತಿತ್ತು.

ಇನ್ನು ನರಿಯ ವಿಷಯ ಹೇಳಲೇ ಬೇಕಿಲ್ಲ. ಆನೆ, ಕಾಡುಹಂದಿ, ಕಾಡುಕೋಣ ಮುಂತಾದ ಪ್ರಾಣಿಗಳ ಮಾಂಸವನ್ನು ತಿಂದು ಅದು ಕೆಲವು ದಿನಗಳಿಗೆಲ್ಲಾ ಮೈತುಂಬಿಕೊಂಡು ದುರಭಿಮಾನಹೊಂದಿತು.

ಕ್ರಮೇಣ ನರಿ ಈ ರೀತಿ ಯೋಚನೆ ಮಾಡತೊಡಗಿತು: "ಈ ಸಿಂಹದ ಹೆಚ್ಚಳವೇನು? ನಾನೇತರಲ್ಲಿ ಕಡಿಮೆ? ನನ್ನನ್ನು ಭಂಟನನ್ನಾಗಿ ಮಾಡಿಕೊಂಡು ಈ ಸಿಂಹ ಸುಲಭವಾಗಿ ಎಲ್ಲ ಮೃಗಗಳನ್ನು ಕೊಲ್ಲುತ್ತಿದೆ. ದುಡಿಮೆ ನನ್ನದು, ಪ್ರತಿಷ್ಠೆ ಸಿಂಹದ್ದು. ಈ ಸಿಂಹವೇ ನನ್ನ ಸೇವಕನಾಗಿದ್ದು, ಪ್ರಾಣಿಗಳು ಇತ್ತಕಂಡೆ ಬಂದಾಗ

ಬಿ. ಜನಾರ್ದನ

ನನಗೆ ಸೂಚನೆಕೊಟ್ಟರೆ, ನಾನೂ ಸಹ ಗುಹೆಯಲ್ಲಿ ವಿಶ್ರಾಂತಿ ಪಡೆಯುತ್ತಾ, ಸಮಯ ಬಂದಾಗ ಹೊರಗೆ ಬಂದು ಪ್ರಾಣಿಗಳನ್ನು ಹಿಡಿದುಕೊಳ್ಳಬಲ್ಲೆ."

ಹೀಗೆಂದು ಯೋಚಿಸಿ ಒಂದು ದಿನ ಸಿಂಹದೊಂದಿಗೆ "ಮಹಾಪ್ರಭು, ನನಗೂ ಸಹ ದಿನಾ ನಿಮ್ಮಂತೆಯೇ ಬೇಟೆಯಾಡಬೇಕೆಂಬ ಬಯಕೆ ಆಗಿದೆ" ಎಂದು ಹೇಳಿತು.

ನರಿಯ ಮನಸ್ಸಿನಲ್ಲಿದ್ದ ಉದ್ದೇಶ ಸಿಂಹ ಕೂಡಲೇ ಗ್ರಹಿಸಿತು. ನರಿಗೆ ಸೊಕ್ಕು ಬಂದಿತೆಂದು ಸಿಂಹ ಅರಿತು ಹೀಗೆ ಹೇಳಿತು:

"ನಿನಗೆ ಬೇಟೆಯಾಡಬೇಕೆಂಬ ಚಪಲವಿದ್ದರೆ ನಮ್ಮ ಕೆಲಸಗಳನ್ನು ಅದಲು ಬದಲು ಮಾಡಿಕೊಳ್ಳೋಣ. ಕೆಲವು ದಿನ ನೀನು ಯಜಮಾನನಾಗಿರು. ನಾನು ನಿನ್ನ ಊಳಿಗನಾಗುವೆನು. ನೀನು ಗುಹೆಯಲ್ಲಿ ಮಲಗಿಕೊ, ನಾನು ಹೊರಗೆ ಕಾವಲು ಕಾಯುವೆನು. ಯಾವುದಾದರೂ ಪ್ರಾಣಿ ಕಾಣಿಸಿಕೊಂಡಾಗ ನಾನು ಸೂಚನೆ ಕೊಡುತ್ತೇನೆ, ನೀನು ಹೊರಗೆ ಬಂದು ಅದನ್ನು ಕೊಂದು ತಿನ್ನು."

ಈ ಮಾತು ಕೇಳಿ ನರಿ ತುಂಬಾ ಸಂತೋಷ ಹೊಂದಿತು. "ನನ್ನ ಕಲಿತನವನ್ನು ನೀವೇ ನೋಡುವಿರಂತೆ" ಎಂದು ಹೇಳಿ ಗುಹೆಯೊಳಕ್ಕೆ ಹೋಗಿ ಮಲಗಿಕೊಂಡಿತು.

ಗುಹೆಯ ಹೊರಗೆ ಕೇಸರಿ ಕಾವಲು ಕಾಯುತ್ತಾ ಕುಳಿತಿತು. ನರಿ ಕುಳಿತಿದ್ದಾಗ ಅಂಜದೆ ಅಳುಕದೆ ಓಡಾಡುತ್ತಿದ್ದ ಪ್ರಾಣಿಗಳು ಸಿಂಹವನ್ನು ಕಂಡು ಬೆದರಿ ಓಡಿಹೋದುವು. ಆದರೆ ಕೊನೆಗೊಂದು ಮದಿಸಿದ ಆನೆ ಮರದ ಕೊಂಬೆಗಳನ್ನು ಮುರಿದು ತಿನ್ನುತ್ತಾ ಅಲಕ್ಷ್ಯವಾಗಿ ಆಕಡೆ ಬಂದಿತು.

ಸಿಂಹ ಗುಹೆಯೊಳಕ್ಕೆ ಇಣಕಿ ನೋಡಿ "ಜೀಯಾ, ಉತ್ತಮ ಅವಕಾಶ ಲಭಿಸಿದೆ" ಎಂದು ಹೇಳಿತು.

ಸೂಚನೆ ಬರುವುದನ್ನೇ ಕಾದುಕುಳಿತಿದ್ದ ನರಿ ಸೆಟೆದೆದ್ದು, ಗುಹೆಯಿಂದ ಹೊರಬಂದು, ಓಡೋಡಿ ಆ ಆನೆಯ ಮೇಲೆ ಜಿಗಿಯಿತು. ಮರುಕ್ಷಣವೇ ಆನೆ ನರಿಯನ್ನು ತನ್ನ ಸೊಂಡಲಿಂದ ಹಿಡಿದೆತ್ತಿ, ನೆಲಕ್ಕೆ ಅಪ್ಪಳಿಸಿತು.

ಆ ಏಟಿಗೆ ತಾಳಲಾರದೆ ನರಿ ಸತ್ತುಬಿದ್ದಿತು.






# 18

[ವಜ್ರಮುಷ್ಟಿ ಸಮುದ್ರಕೇತನ ಚೋರರನ್ನು ಹತಮಾಡಿದ. ತರುವಾಯ ದೇವನಾಯೆ ದಾರಿ ತೋರಿಸಲು, ಸಮುದ ಕೇತನ ವಾಸಸ್ಥಳವನ್ನು ಶಿವದತ್ತ ಮಂದರದೇವರು ಸೇರಿದರು. ಅಲ್ಲಿ ಸಮುದ್ರಕೇತನು ಸೆರೆಹಾಕಿದವರನ್ನೆಲ್ಲಾ ಬಿಡಿಸಿ, ಅವರ ಸಹಾಯದಿಂದ ಸಮುದ್ರ ಕೇತನ ಮೇಲೆ ಯುದ್ಧಕ್ಕೆ ಹೋದರು.]

**ವ**ಜ್ರಮುಷ್ಟಿ ಸಮುದ್ರಕೇತರಿಬ್ಬರಿಗೆ ಭೀಕರ ಹೋರಾಟ ಪ್ರಾರಂಭವಾಯಿತು. ಒಂದೆರಡು ನಿಮಿಷಗಳಲ್ಲಿ ವಜ್ರಮುಷ್ಟಿಯ ಕತ್ತಿಯ ಹೊಡೆತಕ್ಕೆ ಸಮುದ್ರಕೇತನ ಖಡ್ಗ ಎರಡು ತುಂಡಾಗಿ ಮುರಿದು ಬಿತ್ತು. ವಜ್ರಮುಷ್ಟಿ ಸಮುದ್ರಕೇತನ ಸೊಂಟವನ್ನು ಹಿಡಿದು ಮೇಲೆತ್ತಿ ಗಿರಗಿರನೆ ತಿರುಗಿಸಿ ಕೆಳಗೆಸೆದನು.

ಮತ್ತೆ ಮೇಲೇಳುವಷ್ಟರಲ್ಲಿ ವಜ್ರಮುಷ್ಟಿ ಅವನ ಕಂಠವನ್ನು ಕಿವುಚಿ, ಅಬ್ಬರಿಸುತ್ತಾ ಮೇಲಕ್ಕೆದ್ದು, ಅವನನ್ನು ಜೋರಾಗಿ ಕಾಲಿನಿಂದ ಒದೆದನು. ಸಮುದ್ರಕೇತನು ಸತ್ತುಹೋದ.

ಕೂಡಲೇ ಸಮುದ್ರಕೇತನ ಸಂಗಡಿಗರು ಮುಂದೆಬಂದರು. ಅನಂತರ ಆದ ಹೋರಾಟದಲ್ಲಿ ಸಮುದ್ರಕೇತನ ಸಂಗಡಿಗರು ಕೆಲವರು ಸತ್ತುಬಿದ್ದರು. ಮತ್ತೆ ಕೆಲವರು ಬಂದಿಗಳಾದರು.

ಆ ವರೆವಿಗೆ ವಿಸ್ಮಿತರಾಗಿ ನೋಡುತ್ತಿದ್ದ ಹರಿಶಿಖನ ಸೈನಿಕರು ಮುಂದೆಜ್ಜೆ ಹಾಕಿ, "ಇದರ ಅರ್ಥವೇನು? ಯಾರು ನೀವು?" ಎಂದು ಶಿವದತ್ತನನ್ನು ಪ್ರಶ್ನಿಸಿದರು.

ಶಿವದತ್ತನು ನಡೆದುದನ್ನೆಲ್ಲಾ ಅವರೊಂದಿಗೆ ವಿವರಿಸಿ ಹೇಳಿ "ಅಯ್ಯಾ, ನಾವು ನಿಮ್ಮ ಮಕರ ಮಂಡಲದ ರಾಜನಾದ ಹರಿಶಿಖನ ಮಿತ್ರರಾಗ




ಬಯಸುವೆವು. ನೀವು ಒಂದು ಮೊಸಳೆಯನ್ನು ದೇವತೆ ಎಂದು ಗೌರವಿಸಿ, ಪೂಜೆ ಸಲ್ಲಿಸಿ, ದಿನಾ ಅದಕ್ಕೆ ಮನುಷ್ಯರನ್ನು ಬಲಿಕೊಡುವಿರೆಂಬ ವಿಷಯವನ್ನು ಕೇಳಿದ್ದೇವೆ. ಈ ಸಮಯದಲ್ಲಿ ನಿಮಗೆ ಒಂದು ಸಂತೋಷದ ಸುದ್ದಿ ಹೇಳುತ್ತೇವೆ. ಏನೆಂದರೆ ಆ ಪಿಶಾಚಿಯನ್ನು ಹತಗೊಳಿಸುವ ವ್ಯಕ್ತಿ ನಮ್ಮಲ್ಲಿರುವನು" ಎಂದು ವಜ್ರಮುಷ್ಟಿಯನ್ನು ತೋರಿಸಿದನು.

ಇಷ್ಟರಲ್ಲಿ ದೇವಮಾಯೆ, ಸ್ವಯಂಪ್ರಭೆಯೊಂದಿಗೆ ಅಲ್ಲಿಗೆ ಬಂದಳು. ಆಕೆ ಸುರಕ್ಷಿತಳಾಗಿರುವುದನ್ನು ಕಂಡು ಎಲ್ಲರ ಮನಸ್ಸಿಗೆ ನೆಮ್ಮದಿಯಾಯಿತು.

ತರುವಾಯ ಹರಿಶಿಖನ ಭಟರು ಶಿವದತ್ತನ ಕೋರಿಕೆಯಂತೆ ಆತನನ್ನು ವ್ಯಾಘ್ರಮಂಡಲಕ್ಕೆ ಕರೆದುಕೊಂಡು ಹೋದರು. ಹರಿಶಿಖನು ಅವರನ್ನು ಆದರದಿಂದ ಸ್ವಾಗತಿಸಿ "ನಿಮ್ಮ ವಿಷಯವನ್ನು ನಮ್ಮ ಭಟರಿಂದ ಕೇಳಿ ತಿಳಿದೆ. ಮಕರದೇವತೆಯನ್ನು ಕೊಲ್ಲುವಂತಹ ವ್ಯಕ್ತಿ ನಿಮ್ಮಲ್ಲಿರುವ ಮಾತು ಸತ್ಯವೇ?" ಎಂದು ಪ್ರಶ್ನಿಸಿದನು. ಕೂಡಲೇ ಶಿವದತ್ತನು ವಜ್ರಮುಷ್ಟಿಯ ಕಡೆಗೆ ನೋಡಿದ. ವಜ್ರಮುಷ್ಟಿ ಮುಂದೆ ಬಂದು "ಮಹಾಪ್ರಭು, ನೀವು ಆ ಮೊಸಳೆಯಿರುವ ಸ್ಥಳವನ್ನು ನನಗೆ ತೋರಿಸಿ. ಅದನ್ನು ರೆಪ್ಪೆಯಲುಗಿಸುವಷ್ಟರಲ್ಲಿ ಕೊಲ್ಲುವೆನು" ಎಂದನು.

ವಜ್ರಮುಷ್ಟಿಯ ಮಾತಿಗೆ ಹರಿಶಿಖನು ನಕ್ಕು "ಆ ಮೊಸಳೆಯನ್ನು ಮೂರ್ಖಶಿಖಾಮಣಿಗಳನೇಕರು ಪೂಜಿಸುವುದುಂಟು. ಎಲ್ಲರಿಗೂ ಅದೆಂದರೆ ಎಲ್ಲಿಲ್ಲದ ಭಯ. ನಿನ್ನಂತಹ ಕುಬ್ಜನೊಬ್ಬನು ಅದನ್ನು ಕೊಲ್ಲುವನೆಂದು ಅನೇಕರಲ್ಲಿ ನಂಬಿಕೆಯಿದೆ. ನಿನ್ನ ಯಜಮಾನರು ಅಂಗೀಕರಿಸಿದರೆ ನಿನ್ನ ಶಕ್ತಿಸಾಮರ್ಥ್ಯಗಳನ್ನು ನೋಡಿಬಿಡುವ" ಎಂದ.

ಶಿವದತ್ತನು ಅಂಗೀಕಾರ ಸೂಚಿಸಿ, ನಂತರ ಹರಿಶಿಖನೊಂದಿಗೆ ಅತಿ ವಿನಯದಿಂದ ಹೀಗೆಂದನು: "ಮಹಾರಾಜ. ಈ ಮೊಸಳೆಯ ಕಾಟದಿಂದ ನಿಮ್ಮ ಪ್ರಜೆಗಳನ್ನು ನಾವು ಕಾಪಾಡುವೆವು. ಇದಕ್ಕೆ ಪ್ರತಿಯಾಗಿ ನಿಮ್ಮಿಂದ ನಾವು ಒಂದು ಸಹಾಯವನ್ನು ಕೇಳಬಹುದೇ?"

ಹರಿಶಿಖನು ನಕ್ಕು "ಸಹಾಯವೇ? ಅದೆಂತಹ ಸಹಾಯವನ್ನಾದರೂ ಮಾಡಬಲ್ಲೆ. ಮಕರದೇವತೆಯೆಂದು ಕರೆಯಿಸಿಕೊಳ್ಳುತ್ತಿರುವ ಈ





ಮಕರಪಿಶಾಚಿಗೆ ನನ್ನ ಪ್ರಜೆಗಳ ಮೂಢ ವಿಶ್ವಾಸದಿಂದಾಗಿ ಆಹಾರ ಒದಗಿಸಲು ನಾನು ಅಪಾರ ಹಣ ವ್ಯಯಮಾಡಿ ಮನುಜರನ್ನು ಕೊಳ್ಳುತ್ತಿರುವೆನು" ಎಂದ.

ಆಗ ಶಿವದತ್ತನು ಕುಂಡಲಿನೀ ಮತ್ತು ಮರಾಳದ್ವೀಪಗಳ ವಿಷಯವನ್ನು ಹರಿಶಿಖನಿಗೆ ವಿವರಿಸಿ ಹೇಳಿ "ನಿಮ್ಮ ಬಳಿ ಭಾರಿ ನೌಕಾವಳ ಮತ್ತು ಅಗಾಧ ಸೈನ್ಯವಿರುವುದಾಗಿ ಕೇಳಿರುವೆನು. ನಮ್ಮ ದೇಶಗಳನ್ನು ದುರುಳರ ಪಾಲನೆಯಿಂದ ವಿಮುಕ್ತಿಗೊಳಿಸಲು ತಾವು ಸಹಾಯ ಮಾಡಬೇಕು" ಎಂದು ಕೇಳಿದ. ಹರಿಶಿಖನು ಆಗಲೆಂದು ಒಪ್ಪಿಕೊಂಡನು.

ಅನೇಕ ವರ್ಷಗಳಿಂದ ಎಲ್ಲರೂ ಇದಿರು ನೋಡುತ್ತಿದ್ದ ಕುಬ್ಜನು ಈಗ ಬಂದಿರುವನೆಂತಲೂ, ಅವನು ಮೂಢರಿಂದ ಮಕರದೇವತೆಯೆಂದು ಕರೆಯಿಸಿಕೊಳ್ಳುತ್ತಿರುವ ಭಯಂಕರವಾದ ಪಿಶಾಚಿಯನ್ನು, ಮಾರನೇಯ ದಿವಸ ಮಧ್ಯಾಹ್ನವೇಳೆಯಲ್ಲಿ ಕೊಲ್ಲುವನೆಂದೂ ಡಂಗುರ ಸಾರಲಾಯಿತು.

ಮಾರನೇಯ ದಿವಸ ಮದ್ಯಾಹ್ನ ಮಕರಮಂಡಲ ನಿವಾಸಿಗಳೆಲ್ಲಾ ಮೊಸಳೆ ವಾಸಿಸುತ್ತಿದ್ದ ಸ್ಥಳದಲ್ಲಿ ಗುಂಪುಗೂಡಿದರು. ಅಲ್ಲಿದ್ದ ಒಂದು ಬೆಟ್ಟದ ತುದಿಯಿಂದ ನೋಡಿದರೆ, ಕೆಳಗೆ ಹರಿಯುತ್ತಿರುವ ನದಿ ಕಾಣಿಸುತ್ತಿತ್ತು. ಆ ನದಿಯ ಅಂಚಿನಲ್ಲಿದ್ದ ಗುಹೆಯೇ ಆ ಮೊಸಳೆಯ ವಾಸಸ್ಥಳವಾಗಿತ್ತು. ವಜ್ರಮುಷ್ಟಿ ಒಂದು ಅಡಿ ಉದ್ದವಿರುವ ಎರಡು ಹರಿತವಾದ ಖಡ್ಗಗಳನ್ನು ಹಿಡಿಯ ಬಳಿ ಹಗ್ಗದಿಂದ ಬಿಗಿದು ಕಟ್ಟಿ, ಅದನ್ನು ಮುಷ್ಟಿಯಲ್ಲಿ ಬಿಗಿಹಿಡಿದು, ಎಲ್ಲರೂ ನೋಡುತ್ತಿರುವಂತೆಯೇ ಶಿಖರದ ಮೇಲಿಂದ ನದಿಗೆ ಹಾರಿದ. ಅವನು ಕೊಂಚ ದೂರ ನೀರಿನಲ್ಲಿ ಕೊಚ್ಚಿಕೊಂಡುಹೋಗಿ, ತರುವಾಯ ಆಚೆದಡವನ್ನು ಸೇರಿ, ಮೊಸಳೆಯಿದ್ದ ಗುಹೆಯಕಡೆ ನಡೆದನು. ವಜ್ರಮುಷ್ಟಿ ಗುಹೆಯನ್ನು ಸಮೀಪಿಸುವಷ್ಟರಲ್ಲಿ, ಒಳಗಿನಿಂದ ಕಿಡಿಕಾರುವ ಕಣ್ಣುಳ್ಳ ಪರ್ವತಾಕಾರದ ಮೊಸಳೆ ಸರಸರನೆ ಹೊರಬಂದು ಅವನಮೇಲೆ ಒಮ್ಮೆಗೇ ನೆಗೆಯಿತು. ವಜ್ರಮುಷ್ಟಿ ತಾನಿದ್ದ ಸ್ಥಳದಿಂದ ಅಲುಗಾಡದೆ ಗಟ್ಟಿಯಾಗಿನಿಂತು, ತನ್ನ ಕೈಯಲ್ಲಿದ್ದ ಖಡ್ಗಗಳನ್ನು ಅದರ ಬಾಯೊಳಕ್ಕೆ ತುರುಕಿದನು. ಇಕ್ಕಡೆಗಳಲ್ಲೂ ಹರಿತವಾಗಿದ್ದ






ಆ ಖಡ್ಗಗಳು ಮೊಸಳೆಯ ಎರಡು ದವಡೆಗಳಿಗೆ ಚುಚ್ಚಿಕೊಂಡವು. ಅದು ಬಾಧೆಯಿಂದ ಅತ್ತಿತ್ತ ಹೊರಳಾಡುತ್ತ ಗುಡ್ಡವು ಜರಿದುಕೊಂಡಹಾಗೆ ನದಿಗೆ ಹಾರಿತು. ಕತ್ತಿಗಳುಮಾತ್ರ ಅದರ ದವಡೆಗೆ ಚುಚ್ಚಿಕೊಂಡೇ ಇದ್ದುವು.

ವಜ್ರಮುಷ್ಟಿ ಅದೇ ಸಮಯವೆಂದು ಭಾವಿಸಿ ತನ್ನ ಬಳಿಯಿದ್ದ ಒಂದು ಭಾರಿ ಖಡ್ಗವನ್ನು ಒರೆಯಿಂದ ತೆಗೆದು ಮೊಸಳೆಯ ಜೊತೆಗೇ ನದಿಗೆ ಹಾರಿದ. ಒಂದೆರಡು ಗಂಟೆಗಳ ಕಾಲ ವಜ್ರಮುಷ್ಟಿಗೂ ಮೊಸಳೆಗೂ ಭೀಕರವಾದ ನೀರಿನ ಕಾಳಗ ನಡೆಯಿತು.

ವಜ್ರಮುಷ್ಟಿ ಅದರ ಬಾಲದ ಹೊಡೆತಕ್ಕೆ ಸಿಲುಕದೆ ಉಪಾಯವಾಗಿ ತಪ್ಪಿಸಿಕೊಂಡು, ಕ್ರಮೇಣ ಅದರ ಶರೀರವನ್ನು ತನ್ನ ಖಡ್ಗದಿಂದ ತೀವ್ರವಾಗಿ ಗಾಯಗೊಳಿಸಿದನು. ಅದು ಶಕ್ತಿ ಕಳೆದುಕೊಂಡು ಜಡವಾಯಿತು. ಅಂತ್ಯಾವಸ್ಥೆಯಲ್ಲಿದ್ದ ಮೊಸಳೆಯನ್ನು ದಡಕ್ಕೆ ಎಳೆದು ಹಾಕಿದನು ವಜ್ರಮುಷ್ಟಿ.

ಬೆಟ್ಟದ ತುದಿಯಿಂದ ಈ ಭಯಂಕರ ಹೋರಾಟವನ್ನು ವೀಕ್ಷಿಸುತ್ತಿದ್ದ ಜನ, ಮತ್ತು ಹರಿಶಿಖರು ಮೊಸಳೆ ಮರಣಿಸಿದುದನ್ನು ಕಂಡು ಜಯಕಾರ ಮಾಡಿದರು. ಅವರು ಹಗ್ಗದ ಸಹಾಯದಿಂದ ವಜ್ರಮುಷ್ಟಿಯನ್ನು ಬೆಟ್ಟದ ಮೇಲಕ್ಕೆ ಎಳೆದುಕೊಂಡರು.

ಒಂದು ವಾರದಪರ್ಯಂತ ಮಕರಮಂಡಲದಲ್ಲಿ ಆನಂದೋತ್ಸವಗಳು ವಿಜೃಂಭಣೆಯಿಂದ ನಡೆದುವು. ಜೀವಿಸಿದ್ದಾಗ ಮಕರದೇವತೆಯೆಂದು ಪೂಜಿಸಲ್ಪಡುತ್ತಿದ್ದ ಆ ಮೊಸಳೆ, ಸತ್ತನಂತರ ಎಲ್ಲರಿಂದಲೂ ಮಕರಪಿಶಾಚಿಯೆನಿಸಿಕೊಂಡು ಅಪಹಾಸ್ಯಕ್ಕೆ ಗುರಿಯಾಯಿತು.

ಹರಿಶಿಖನು ತನ್ನ ಮಾತಿನಪ್ರಕಾರ ಶಿವದತ್ತನಿಗೆ ನೌಕಾಬಲವನ್ನೂ ಇಪ್ಪತ್ತು ಸಾವಿರ ಸೈನಿಕರನ್ನೂ ಒಪ್ಪಿಸಿದನು. ಒಂದು ಶುಭಮುಹೂರ್ತದಲ್ಲಿ ಶಿವದತ್ತ, ಮಂದರದೇವರು ಮತ್ತೆ ಮರಾಳ, ಕುಂಡಲಿನೀ ದ್ವೀಪಗಳನ್ನು ನರವಾಹನನಿಂದ ವಶಪಡಿಸಿಕೊಳ್ಳಲು ಹೊರಟರು.

ಅವರೊಂದಿಗೆ ದೇವಮಾಯೆ, ಸ್ವಯಂಪ್ರಭೆ ಸಹ ಇದ್ದರು. ಸಮಯವರಿತು ದೇವಮಾಯೆ ಸ್ವಯಂಪ್ರಭೆ ಮನದ್ವೀಪದ ಒಡೆಯನಾದ ಶಮನ ಮಹಾರಾಜನ ಮಗಳೆಂದು ಶಿವದತ್ತನೊಂದಿಗೆ ಹೇಳಿದಳು.







ಶಿವದತ್ತನು ಕೂಡಲೇ ಶಮನದ್ವೀಪಕ್ಕೆ ರಾಯಭಾರಿಗಳನ್ನು ಕಳುಹಿಸಿದನು. ಸ್ವಯಂಪ್ರಭೆ ಮಂದರದೇವರ ವಿವಾಹದಿಂದ ಮೂರು ರಾಜ್ಯಗಳಿಗೂ ಕ್ಷೇಮವುಂಟಾಗುವುದೆಂದು ಆತನ ನಂಬಿಕೆ. ಸ್ವಯಂಪ್ರಭೆ ಮಂದರದೇವರು ಪರಸ್ಪರಾನುರಾಗಿಗಳಾಗಿರುವ ವಿಷಯವನ್ನೂ ಆತನು ಈ ಮೊದಲೇ ಗ್ರಹಿಸಿದ್ದನು.

ತನ್ನ ಮಗಳು ಸುರಕ್ಷಿತಳಾಗಿರುವಳೆಂದೂ, ಆಕೆಯನ್ನು ಮರಾಳ ದ್ವೀಪದ ಅರಸನಾದ ಮಂದರದೇವನು ವಿವಾಹವಾಗಲಿಚ್ಛಿಸುವನೆಂದೂ ತಿಳಿದಾಗ ಶಮನನ ಆನಂದಕ್ಕೆ ಪಾರವೇ ಇಲ್ಲ. ಆತನೂ ಸಹ ತನ್ನ ಸೈನ್ಯದೊಂದಿಗೆ ಭಾವಿ ಅಳಿಯನಾದ ಮಂದರದೇವನಿಗೆ ಸಹಾಯ ಮಾಡಲು ಸಂತೋಷದಿಂದ ಹೊರಟನು.



ತನ್ನ ಮೇಲೆ ಬೀಳಲಿರುವ ಸೈನ್ಯಪ್ರವಾಹವನ್ನು ಬೇಹುಗಾರರಿಂದ ತಿಳಿದ ನರವಾಹನನು ಭಯದಿಂದ ಕಂಪಿಸಿದನು. ಮರಾಳ ಕುಂಡಲಿನೀ ದ್ವೀಪಗಳೆರಡನ್ನೂ ಒಂದೇಬಾರಿ ಕಾಪಾಡುವುದು ಅಸಾಧ್ಯವೆನಿಸಿತು. ಅವನು ಬೇರೆ ಉಪಾಯಗಾಣದೆ ಸದ್ದುಸಡಗರಗಳಿಲ್ಲದೆ ಮರಾಳದ್ವೀಪವನ್ನು ತೊರೆದು ತನ್ನ ಯಾವತ್ತೂ ಸೈನ್ಯವನ್ನು ಕುಂಡಲಿನೀ ದ್ವೀಪದಲ್ಲಿ ಜಮಾಯಿಸಿದನು. ಅವುಗಳ ನಡುವೆ ತಾನು ಕಾಣದಂತೆ ಹುದುಗಿಕೊಂಡನು.

ಯಾವ ರೀತಿಯ ಪ್ರತಿಭಟನೆಯೂ ಇಲ್ಲದೆ ಶಿವದತ್ತ, ಮಂದರದೇವರು ಮೊದಲು ಮರಾಳ ದ್ವೀಪವನ್ನು ವಶಪಡಿಸಿಕೊಂಡರು. ನಂತರ ಶಮನಸೈನಿಕರನ್ನು ಸಂಗಡ ಕರೆದುಕೊಂಡು ಒಂದು ದಿನ ಸೂರ್ಯೋದಯ ವೇಳೆಗೆ ಕುಂಡಲಿನೀ ದ್ವಿಪವನ್ನು ಸೇರಿಕೊಂಡರು. ತೀರಪ್ರಾಂತದಲ್ಲಿ ಎಲ್ಲೂ ನರವಾಹನನ ಸೈನಿಕರ ಸುಳಿವಿರಲಿಲ್ಲ.

ತಾವು ಭಾರಿ ಸೈನ್ಯವನ್ನು ಎದುರಿಸಬೇಕಾಗಬಹುದೆಂದೆಣಿಸಿದ್ದ ಶಿವದತ್ತನಿಗೆ ಈ ಪರಿಸ್ಥಿತಿ ತುಂಬಾ ಆಶ್ಚರ್ಯವನ್ನುಂಟುಮಾಡಿತು. ಆತನು ನಗರಕ್ಕೆ ಬೇಹುಗಾರರನ್ನು ಅಟ್ಟಿದನು. ಅವರು ಹೋದ ಕೊಂಚ ಹೊತ್ತಿಗೆಲ್ಲಾ ಹಿಂತಿರುಗಿ "ಅಯ್ಯಾ, ನಾವು ಧಾಳಿಮಾಡಲು ಬರುವೆವೆಂದು ತಿಳಿದು ಹಿಂದೆ ನರವಾಹನನಿಂದ ಚಿತ್ರಹಿಂಸೆಗೆ ಗುರಿಯಾಗಿದ್ದ ಕಿರಾತರು ಒಮ್ಮೆಗೇ ಅವನಮೇಲೆ ತಿರುಗಿಬಿದ್ದರು. ಅವರ ತಂಡಗಳು ಈಗ ಕುಂಡಲಿನೀ ನಗರವನ್ನು ಪ್ರವೇಶಿಸು



ತ್ತಿರುವುದಾಗಿ ತಿಳಿದುಬಂದಿದೆ" ಎಂದರು. ಈ ವಿಷಯ ಮಂದರದೇವನನ್ನು ತುಂಬಾ ನಿರುತ್ಸಾಹಗೊಳಿಸಿತು. "ಎಂದಿಗಾದರೂ ನನ್ನ ಕೈಯಿಂದಲೇ ಆ ದುರುಳ ನರವಾಹನನನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದ್ದೆ. ನನ್ನ ಪ್ರತಿಜ್ಞೆ ಕನಸಾಗುವಂತಿದೆ" ಎಂದು ನಿಡುಸುಯ್ದ ಮಂದರದೇವ.

"ಮಂದರದೇವ, ಆ ರೀತಿ ಪ್ರತಿಜ್ಞೆ ಮಾಡಿದಾತ ನೀನೊಬ್ಬನೇ ಅಲ್ಲ. ಹಿಂದೆ ಅನೇಕ ಕಿರಾತ ತರುಣರೂಸಹ ಪ್ರತಿಜ್ಞೆ ಮಾಡಿರುವರು. ಒಬ್ಬ ನರವಾಹನನು ಎಲ್ಲರ ಖಡ್ಗಕ್ಕೂ ಸಿಗುವುದು ಅಸಂಭವ" ಎಂದ ಶಿವದತ್ತ ನಗುತ್ತಾ.



ತರುವಾಯ ಶಿವದತ್ತನು ಐವತ್ತು ಜನ ಆಶ್ವಿಕರನ್ನು ವಜ್ರಮುಷ್ಟಿಯೊಂದಿಗೆ ನಗರಕ್ಕೆ ಕಳುಹಿಸಿದ. ಒಂದುವೇಳೆ ನರವಾಹನನು ಇನ್ನೂ ಬದುಕಿದ್ದರೆ, ಅವನನ್ನು ಕೊಲ್ಲಕೂಡದೆಂದು ಕಿರಾತರಿಗೆ ಅವರಮೂಲಕ ಸುದ್ದಿ ಕಳುಹಿಸಿದ.

ವಜ್ರಮುಷ್ಟಿ ಆಶ್ವಿಕರೊಂದಿಗೆ ಕುಂಡಲಿನೀ ನಗರವನ್ನು ಸೇರುವವೇಳೆಗೆ, ಮಿಡತೆಗಳದಳದಂತೆ ವ್ಯಾಧರು ನಗರವನ್ನು ಮುತ್ತುತ್ತಿದ್ದರು. ಅವರ ಅಂಬಿಗೆ, ಖಡ್ಗಗಳಿಗೆ ನರವಾಹನನ ಸೈನಿಕರು ಬಲಿಯಾದರು. ವಜ್ರಮುಷ್ಟಿ ಶಿವದತ್ತನಿಂದ ತಾನು ತಂದ ಸುದ್ದಿಯನ್ನು ವ್ಯಾಧರ ನಾಯಕರಿಗೆ ತಿಳಿಸುತ್ತಾ ಕೋಟೆಯನ್ನು ಸಮೀಪಿಸುವಷ್ಟರಲ್ಲಿ, ಒಂದು ಬುರುಜಿನ ಮೇಲೆ ಬಂಧಿತನಾಗಿದ್ದ ನರವಾಹನನು ವ್ಯಾಧಭಟರ ನಡುವೆ ಕಾಣಿಸಿದನು.

ವಜ್ರಮುಷ್ಟಿ "ಅವನನ್ನು ಕೊಲ್ಲದಿರಿ. ಕೊಲ್ಲದಿರಿ" ಎಂದು ಅರಚುತ್ತಾ, ಕುದುರೆಯನ್ನು ಬುರುಜಿನಕಡೆ ಓಡಿಸುತ್ತಿದ್ದನು. ಆದರೆ ವ್ಯಾಧರು ಕ್ರೂರ ನರವಾಹನನನ್ನು ಬುರುಜಿನಮೇಲಿಂದ ಕೆಳಗಿದ್ದ ಕಂದಕದೊಳಕ್ಕೆ ತಳ್ಳಿಬಿಟ್ಟರು. ಆಗ ಅಲ್ಲಿ ಗುಂಪುಗೂಡಿದ್ದ ಕಿರಾತರು ಹರ್ಷಧ್ವನಿಗೈದರು.

ಎರಡು ಮೂರು ಗಂಟೆಗಳನಂತರ ಶಿವದತ್ತ ಮಂದರದೇವರು ಶಮನನೊಂದಿಗೆ ಅಲ್ಲಿಗೆ ಬಂದರು. ಅವರಿಗೆ ವ್ಯಾಧರ ನಾಯಕರು ಅಭೂತಪೂರ್ವ ಸ್ವಾಗತವಿತ್ತರು. ಈ ಮೊದಲೇ ಮಂದರದೇವನು ಮರಾಳ ಮತ್ತು ಕುಂಡಲಿನೀ ದ್ವೀಪಗಳ ರಾಜನೆಂದು ಸಾರಲಾಯಿತು. ವ್ಯಾಧರಿಂದ ನರವಾಹನನು ಕಸಿದುಕೊಂಡಿದ್ದ ಪ್ರದೇಶವನ್ನೆಲ್ಲಾ ಮತ್ತೆ ಅವರಿಗೇ ವಹಿಸಿಕೊಡ





ಲಾಯಿತು. ಈ ಬಗೆಯ ವ್ಯವಸ್ಥೆಗಳಾಗಿ ಒಂದು ವಾರವನಂತರ ಮಂದರದೇವ ಸ್ವಯಂಪ್ರಭೆಯರಿಗೆ ವೈಭವದಿಂದ ವಿವಾಹವಾಯಿತು. ಶಿವದತ್ತನು ಹರಿಶಿಖನ ಸೈನಿಕರಿಗೆಲ್ಲಾ ಬಹುಮಾನಗಳನ್ನು ಕೊಟ್ಟು ಅವರನ್ನು ಮಕರಮಂಡಲಕ್ಕೆ ಕಳುಹಿಸಿದನು. ತರುವಾಯ ಒಂದು ದಿನ ಶಿವದತ್ತನ ಕೋರಿಕೆಯಂತೆ ಮಂದರದೇವನು ದರ್ಬಾರನ್ನೇರ್ಪಡಿಸಿದನು. ದರ್ಬಾರಿಗೆ ಮರಾಳ, ಕುಂಡಲಿನೀ ದ್ವೀಪಗಳ ಪ್ರಮುಖರೆಲ್ಲರೂ ಬಂದಿದ್ದರು. ಆ ತುಂಬಿದ ಸಭೆಯಲ್ಲಿ ಶಿವದತ್ತನು ತಾನು ಸನ್ಯಾಸಾಶ್ರಮವನ್ನು ಸ್ವೀಕರಿಸುವುದಾಗಿ ಹೇಳಿದನು.

ಈ ವಿಷಯ ಮಂದರದೇವ ಮತ್ತು ಸಭಿಕರಲ್ಲಿ ಕಳವಳಕ್ಕೆಡೆಕೊಟ್ಟಿತು. ಅವರು ಶಿವದತ್ತನನ್ನು ಮಂತ್ರಿಯಾಗಿ, ರಾಜಗುರುವಾಗಿಯಾಗಲೀ ಇದ್ದು, ರಾಜ್ಯಭಾರವು ಸುಸೂತ್ರವಾಗಿ ನಡೆಯುವಂತೆ ನೋಡಿಕೊಳ್ಳಬೇಕೆಂದು ಪ್ರಾರ್ಥಿಸಿದರು. ಶಿವದತ್ತನು ಆ ಸಲಹೆಯನ್ನು ಅಂಗೀಕರಿಸಲಿಲ್ಲ. ಸಭಿಕರನ್ನೂ, ಮಂದರದೇವನನ್ನೂ ಉದ್ದೇಶಿಸಿ ಹೀಗೆ ನುಡಿದ ಶಿವದತ್ತ:

"ಎಂತಹ ಧರ್ಮವನ್ನು ಆಚರಿಸಿದರೆ ದೇಶಕ್ಕೆ ಕ್ಷೇಮವೆಂಬುದನ್ನು ಕುಂಡಲಿನೀ ಮತ್ತು ಮರಾಳ ದ್ವೀಪವಾಸಿಗಳು ಅರಿತಿರುವರೆಂದು ಭಾವಿಸುವೆನು. ಚಿತ್ರಸೇನ, ಸಮರಸೇನರ ಪರಿಪಾಲನೆಯೊಂದಿಗೆ ನರವಾಹನನ ಆಳ್ವಿಕೆಯ ಸವಿಯನ್ನು ಕಂಡಿರುವಿರಿ. ಆದುದರಿಂದ ಯಾವುದು ಧರ್ಮ, ಯಾವುದು ಅಧರ್ಮವೆಂಬುದು ನಿಮಗೆಲ್ಲರಿಗೂ ತಿಳಿದಿರಬೇಕು. ಅದಕ್ಕೆ ಅನುಗುಣವಾಗಿ ಪ್ರತಿಯೊಬ್ಬರೂ ಸದ್ಧರ್ಮವನ್ನಾಚರಿಸುವಿರೆಂದು ನಾನು ನಂಬುತ್ತೇನೆ."

ಶಿವದತ್ತನ ಮಾತಿಗೆ ಸಭಿಕರು ಹರ್ಷಧ್ವನಿಗೈದರು. ಹರ್ಷಧ್ವನಿಗಳ ನಡುವೆ ಶಿವದತ್ತನು ಎಲ್ಲರಿಗೂ ನಮಸ್ಕರಿಸಿ, ಸಭೆಯಿಂದ ಹೊರಬಿದ್ದನು. ಪ್ರಭು ಮತ್ತು ಪ್ರಜೆಗಳು ಆತನೊಂದಿಗೆ ನಡೆದರು. ಶಿವದತ್ತನು ಊರಾಚೆಯಿದ್ದ ಕಾಡಿನ ಅಂಚನ್ನು ತಲುಪಿದ ಕೂಡಲೇ ಎಲ್ಲರಿಗೂ ಮತ್ತೊಮ್ಮೆ ವಂದಿಸಿ ಕಾಡನ್ನು ಪ್ರವೇಶಿಸಿದನು. ಭಾರವಾದ ಹೃದಯದಿಂದ ರಾಜನೂ ಪ್ರಜೆಗಳೂ ನಗರಕ್ಕೆ ಹಿಂತಿರುಗಿದರು.

[ಮುಗಿಯಿತು]






ಚಿತ್ರಕೂಟವೆಂಬ ಅಗ್ರಹಾರದಲ್ಲಿ ಒಬ್ಬ ಪಂಡಿತನಿದ್ದನು. ಅವನಿಗೆ ಸಾವಿತ್ರಿ ಎಂಬ ಮಗಳಿದ್ದಳು. ಶರಭ, ಕರಭರು ಅವನ ಪ್ರಿಯ ಶಿಷ್ಯರು. ಅವರು ವ್ಯಾಸಂಗದಲ್ಲಿ ಅಷ್ಟು ಚತುರರೇನೂ ಅಲ್ಲ. ಆದರೆ ಅವರದು ತುಂಬಾ ದೂರಾಲೋಚನೆ.

ಹೀಗಿರಲು ಒಂದು ದಿನ ಆ ಗ್ರಾಮಕ್ಕೆ ಕಾಮಗ್ರೀವನೆಂಬ ಒಬ್ಬ ಬ್ರಾಹ್ಮಣನು ಬಂದನು. ಆತನ ವಯಸ್ಸು ಸುಮಾರು ಅರವತ್ತು. ಆತನು ಪಂಡಿತನ ಮನೆಯ ಮುಂದೆ ಹೋಗುತ್ತಿರಲು, ಹೊಸಲಿನಬಳಿ ನಿಂತಿದ್ದ ಸಾವಿತ್ರಿಯನ್ನು ಕಂಡು ತಟಕ್ಕನೆ ನಿಂತುಬಿಟ್ಟನು. ಆ ಹುಡುಗಿ ಕೂಡಲೇ ಮನೆಯೊಳಕ್ಕೆ ಓಡಿ ತನ್ನ ತಂದೆಯೊಂದಿಗೆ, "ಅಪ್ಪಾ, ಯಾರೋ ಬಂದರು" ಎಂದಳು.

ಪಂಡಿತನು ಲಗುಬಗನೆ ಹೊರಗೆ ಬಂದು ಮುದುಕನನ್ನು ನೋಡಿ ಕೂಡಲೇ ಆತನು ಪರಸ್ಥಳದವನೆಂದು ಗ್ರಹಿಸಿದನು. "ಅಯ್ಯಾ, ಈ ಹೊತ್ತು ನಮ್ಮ ಮನೆಯಲ್ಲೇ ಊಟಕ್ಕೆ ದಯಮಾಡಿಸಿ" ಎಂದು ಆಹ್ವಾನಿಸಿದನು. ಕಾಮಗ್ರೀವನು ಬಯಸಿದ್ದೂ ಅದೇ. ಊಟವಾದ ನಂತರ ಪಂಡಿತನೊಂದಿಗೆ "ಅಯ್ಯಾ, ತಮ್ಮೊಂದಿಗೆ ರಹಸ್ಯವಾಗಿ ಮಾತನಾಡುವುದಿದೆ" ಎಂದ.

ಕೂಡಲೇ ಪಂಡಿತನು ತನ್ನ ಶಿಷ್ಯರಿಬ್ಬರನ್ನು ಹೊರಗೆ ಕಳುಹಿಸಿದ. ತರುವಾಯ ಕಾಮಗ್ರೀವನು ಪಂಡಿತನೊಂದಿಗೆ "ನಾನು ವೃದ್ಧನೆಂದು ತಾತ್ಸಾರ ಮಾಡಬೇಡಿ. ನನಗೆ ನಿಮ್ಮ ಮಗಳನ್ನು ಕೊಟ್ಟು ವಿವಾಹಮಾಡಿ. ನಾನೊಬ್ಬ ಯೋಗಿಯಿಂದ ಪರಕಾಯ ಪ್ರವೇಶ ಮತ್ತು ಇಂದ್ರಜಾಲ ವಿದ್ಯೆಗಳನ್ನು ಕಲಿತಿರುವೆನು. ಆದರೆ ಅವುಗಳ ಮಹಿಮೆಯನ್ನು ನೋಡುವ ಮೊದಲೇ ಕಾಶಿಯಲ್ಲಿ ಗಂಗಾತೀರದಲ್ಲಿ ಕಾಲು ಜಾರಿ ಕೆಳಗೆ ಬಿದ್ದು ಒಂದು ಹಲ್ಲು ಮುರಿದುಕೊಂಡೆ. ಇನ್ನು ನನಗೆ ಆ ವಿದ್ಯೆಗಳು ಫಲಿಸುವುದಿಲ್ಲ. ಆದುದರಿಂದ ಮದುವೆಯಾಗಿ ಒಬ್ಬ ಮಗನನ್ನು ಪಡೆದು, ಅವನಿಗೆ ಈ ವಿದ್ಯೆಗಳನ್ನು ಧಾರೆ ಎರೆಯುವ ಹಂಬಲ" ಎಂದ.

ಕಾಮಗ್ರೀವನ ಮಾತಿನಲ್ಲಿ ಪಂಡಿತನಿಗೆ ನಂಬಿಗೆಯುಂಟಾಗಲಿಲ್ಲ. ಹತ್ತು ವರ್ಷವಾದರೂ ತುಂಬದ ಮಗಳನ್ನು ಆ ಮುದುಕ

ಜಿ. ಸ್ವಾಮಿನಾಥ



ನಿಗೆ ಮದುವೆಮಾಡಿಕೊಡಲು ಅವನಿಗಿಷ್ಟವಿಲ್ಲ ವಾಯಿತು. ಅದರಿಂದ ಕಾಮಗ್ರೀವನೊಂದಿಗೆ "ಅಯ್ಯಾ, ನನ್ನನ್ನು ಕ್ಷಮಿಸಿ. ನನಗಿರುವವಳು ಒಬ್ಬಳೇ ಮಗಳು. ಈಗಲೇ ಮದುವೆಮಾಡುವ ಮನಸ್ಸಿಲ್ಲ" ಎಂದ.

ಕಾಮಗ್ರೀವನು ನಿರಾಶೆಹೊಂದಿ ಪಂಡಿತನ ಬಳಿ ಅಪ್ಪಣೆ ಪಡೆದು ತನ್ನ ದಾರಿ ಹಿಡಿದ.

ಶರಭ, ಕರಭರು ಮರೆಯಲ್ಲಿ ನಿಂತು ಈ ಸಂಭಾಷಣೆಯನ್ನು ಕೇಳಿದರು. ಅವರಿಬ್ಬರೂ ಬಹಳ ಹೊತ್ತು ಯೋಚಿಸಿ ಒಂದು ನಿರ್ಧಾರಕ್ಕೆ ಬಂದರು. 'ನಮಗಂತೂ ವಿದ್ಯೆ ತಲೆಗೆ ಹತ್ತುವು ದಿಲ್ಲ. ಈ ಮುದುಕನ ಶುಶ್ರೂಷೆ ಮಾಡಿದರೆ ಆತನು ಆ ವಿದ್ಯೆಗಳನ್ನು ನಮಗೆ ಕಲಿಸಬಹುದು' ಹೀಗೆಂದು ಯೋಚಿಸಿ ಅವರು ತಮ್ಮ ಗುರುವಿನ ಅಪ್ಪಣೆಯನ್ನು ಸಹ ಪಡೆಯದೆ, ಕಾಮಗ್ರೀವನು ಹೋದ ದಾರಿಯನ್ನು ಕೇಳಿ ತಿಳಿದುಕೊಂಡು, ಆ ಸಾಯಂಕಾಲವೇ ಆತನನ್ನು ಕೂಡಿಕೊಂಡರು. ಅವರನ್ನು ಕಂಡು ಆ ವೃದ್ಧನು "ನೀವಿಲ್ಲೇಕೆ ಬಂದಿರಿ?" ಎಂದು ಕೇಳಿದನು.

"ಸ್ವಾಮಿ, ನೀವು ನಮ್ಮ ಗುರು ಕುಮಾರಿ ಯನ್ನು ಮದುವೆಯಾಗ ಬಯಸಿದಿರಿ. ಆದರೆ ಆತನು ಈ ಸಂಬಂಧಕ್ಕೆ ಒಪ್ಪಲಿಲ್ಲ. ನೀವು ಹೋದನಂತರ ಆ ದಂಪತಿಗಳ ನಡುವೆ ಒಂದು ಪುಟ್ಟಯುದ್ಧವೇ ನಡೆದು ಹೋಯಿತು. ಆಕೆ ಮದುವೆ ಮಾಡಿದ್ದರೆ ಚೆನ್ನಾಗಿತ್ತೆಂದಳು. ನಾವು ಆಕೆಯ ಮಾತಿಗೆ ಬೆಂಬಲವಿತ್ತೆವು. ಗುರುಗಳು ನಮ್ಮಮೇಲೆ ಉರಿದುಬಿದ್ದು ನಮ್ಮನ್ನು ಮನೆ ಯಿಂದ ಓಡಿಸಿಬಿಟ್ಟರು. ನಿಮಗೆ ಹೇಗಾದರೂ ಮದುವೆ ಮಾಡಿಸುವೆನೆಂದು ಶಪಥಮಾಡಿ ಇತ್ತ ಬಂದೆವು. ನಮ್ಮ ಶಪಥ ಕೈಗೂಡಲು ಅವಕಾಶ ಕೊಡಿ" ಎಂದು ಕೇಳಿಕೊಂಡರು ಶರಭ, ಕರಭರು.

ಇವರ ಮಾತು ಕೇಳಿ ಕಾಮಗ್ರೀವನ ಆಶೆ ಚಿಗುರಿತು. ಅವರಿಬ್ಬರನ್ನೂ ತನ್ನೊಂದಿಗೆ ಬರಲು ಒಪ್ಪಿಕೊಂಡನು. ಆತನು ಊರೂರು ತಿರುಗಿ ತನಗೆ ತಮ್ಮ ಮಗಳನ್ನು ಕೊಡುವಂತೆ ಅನೇಕರನ್ನು ಕೇಳಿದನು. ಆತನು ಎದುರಿಗಿರು ವಾಗ ಶರಭ, ಕರಭರು ಬೆಂಬಲವಿತ್ತು ಮಾತ ನಾಡುವರು. ಪರೋಕ್ಷದಲ್ಲಿ ಹೆಣ್ಣಿನ ಕಡೆಯವ ರೊಂದಿಗೆ "ಆ ಮುದಿಗೂಬೆಗೆ ನಿಮ್ಮ ಮಗ ಳನ್ನು ಕೊಡುವಿರಾ? ಇಂದೋ ನಾಳೆಯೋ ಸಾಯುವ ಸ್ಥಿತಿಯಲ್ಲಿದ್ದಾನೆ. ಅನ್ಯಾಯವಾಗಿ

ನಿಮ್ಮ ಹೆಣ್ಣು ಮಗಳ ಕೊರಳನ್ನು ಕತ್ತರಿಸಬೇಡಿ" ಎಂದು ಹೇಳುವರು.

ಏನಾದರೇನು ಕಾಮಗ್ರೀವನಿಗೆ ಮದುವೆಯಾಗಲೇ ಇಲ್ಲ. ಸ್ವಲ್ಪಕಾಲದ ನಂತರ ಆತ ಹಾಸಿಗೆ ಹಿಡಿದ. ಆಯುಸ್ಸೂ ತುಂಬಿತೆಂದು ತಿಳಿದ ಕೂಡಲೇ ಆತನು ಶರಭನಿಗೆ ಪರಕಾಯ ಪ್ರವೇಶಮಾಡುವ ವಿದ್ಯೆಯನ್ನೂ, ಕರಭನಿಗೆ ಇಂದ್ರಜಾಲ ವಿದ್ಯೆಯನ್ನೂ ತಿಳಿಸಿ ಕಡೇಬಾರಿ ಕಣ್ಣು ಮುಚ್ಚಿದ.

ಈ ರೀತಿ ತಮ್ಮ ಕೋರಿಕೆ ಸಫಲವಾಗಲು ಶರಭ ಕರಭರು ತಮ್ಮ ತಮ್ಮ ವಿದ್ಯೆಯಿಂದ ಹಣಗಳಿಸಲು ದೇಶಸಂಚಾರ ಹೊರಟರು. ಕೆಲವು ದಿನಗಳು ಪ್ರಯಾಣಮಾಡಿ ಅವರು ಒಂದು ನಗರವನ್ನು ಸೇರಿದರು. ಕರಭನು ತನ್ನ ಇಂದ್ರಜಾಲ ವಿದ್ಯೆಯನ್ನು ರಾಜನ ಮುಂದೆ ತೋರಿಸಿ, ಆತನ ಮೆಚ್ಚಿಗೆ ಪಡೆದು ಹಣ ಸಂಪಾದಿಸಲು ಹವಣಿಸಿದನು. ಇದನ್ನು ಕಂಡು ಶರಭನು ಅಸೂಯೆಗೊಂಡನು. ನಗರದಲ್ಲಿ ವಿಚಾರಿಸಲು ರಾಜನು ಅಸ್ವಸ್ಥತೆಯಿಂದ ಇರುವನಾದ ನಿಮಿತ್ತ ಯಾವ ವಿನೋದ ವಿಲಾಸ ಕಾರ್ಯಗಳಲ್ಲಿ ಭಾಗ ವಹಿಸಲು ಇಚ್ಛಿಸುವುದಿಲ್ಲವೆಂದು ತಿಳಿದುಬಂತು. ಇದನ್ನು ಕೇಳಿ ಕರಭನು ಕರುಬಿದ. ರಾಜನು ಸತ್ತುಹೋದರೆ ಶರಭನೆಲ್ಲಿ ಪರಕಾಯ ಪ್ರವೇಶ ಮಾಡುವನೋ ಎಂದು ಅವನು ತಳಮಳಿಸಿದನು.

ಹೀಗಿರಲು ಕೆಲವು ದಿನಗಳಿಗೆ ರಾಜನ ಬೇನೆ ವಾಸಿ ಆಯಿತು. ಒಂದು ದಿನ ಕರಭ ತನ್ನ



ಇಂದ್ರಜಾಲ ವಿದ್ಯೆಯನ್ನು ರಾಜನ ಮುಂದೆ ತೋರಿಸಿ ಆತನಿಂದ ಬಹುಮಾನಗಳನ್ನು ಪಡೆದನು. ಇದನ್ನು ಕಂಡು ಶರಭನು ಮತ್ಸರಗೊಂಡು ಕರಭನೊಂದಿಗೆ ಜಗಳವಾಡಿ ತನ್ನಿಷ್ಟಕ್ಕೆ ತಾನು ಎಲ್ಲಿಗೋ ಹೊರಟು ಬಿಟ್ಟನು.

ಅವನು ಹೋಗಿ ಹೋಗಿ ಒಂದು ನಗರವನ್ನು ಸೇರಿಕೊಂಡನು. ಅವನು ಹೋದ ದಿನವೇ ಆ ನಗರದ ರಾಜನಾದ ರತ್ನಾಕರನು ಮರಣಿಸಿದನು. ಈ ವಿಷಯ ಶರಭನ ಕಿವಿಗೆ ಬಿದ್ದ ಕೂಡಲೇ ಅವನು ಒಂದು ಕಡೆ ಚಿತಿಯೇರಿಸಿ ಅದರಲ್ಲಿ ತನ್ನ ಶರೀರವನ್ನು ಬಿಟ್ಟು, ತಾನು ರತ್ನಾಕರನ ಶರೀರದೊಳಕ್ಕೆ ಪ್ರವೇಶಮಾಡಿದನು. ಸತ್ತುಹೋದ ರಾಜನು ಪುನಃ ಬದುಕಿದನೆಂದು ಜನ ಆನಂದಿಸಿದರು.

ಆದರೆ ಪುನರ್ಜನ್ಮ ತಾಳಿದ ರಾಜನಲ್ಲಿ ಅನೇಕ ಬದಲಾವಣೆಗಳು ತೋರಿಬಂದುವು. ಹಿಂದಿನ ರಾಜಠೀವಿ ಆತನಲ್ಲಿರಲಿಲ್ಲ. ಯದ್ವಾತದ್ವಾ ಮಾತನಾಡುತ್ತಿದ್ದ. ತನ್ನ ಸ್ವಂತ ವಿಷಯಗಳೇ ತಿಳಿಯದವನಂತೆ ನಡೆದುಕೊಳ್ಳುತ್ತಿದ್ದ. ಏಕಾ ಏಕಿ ಈ ಮಾರ್ಪಾಟನ್ನು ಕಂಡು ಮಂತ್ರಿಗಳು ಆಶ್ಚರ್ಯಹೊಂದಿದರು. ರಾಣಿ ಮತ್ತು ಆಕೆಯ ಮಗಳು ಕೀರ್ತಿಸೇನೆ ರಾಜನ ಬಳಿಗೆ ಹೋಗಲು ನಿರಾಕರಿಸಿದರು. ಮಂತ್ರಿಗಳೇ ಸ್ವತಃ ಬಂದು ಮಹಾರಾಣಿಯೊಂದಿಗೆ "ತಾಯಿ, ಮಹಾ ರಾಜರು ತಮ್ಮನ್ನು ಕರೆಯುತ್ತಿರುವರು" ಎಂದು ಹೇಳಲು, ಮಹಾರಾಣಿ "ಮಹಾರಾಜರು ಅಂದೇ ಹೋದರು. ನಾನು ವಿಧವೆ. ನನ್ನನ್ನು ಯಾರೂ ಕರೆಯಿಸಬೇಕಾಗಿಲ್ಲ" ಎಂದು ಹೇಳಿಬಿಟ್ಟಳು.

ಶರಭನು ರತ್ನಾಕರನ ಶರೀರವನ್ನು ಪ್ರವೇಶಿಸಿದ ಕೊಂಚ ದಿನಗಳಿಗೆ ಕರಭನು ಆ ನಗರವನ್ನು ಸೇರಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಅತಿಥಿಯಾಗಿ ಉಳಿದುಕೊಂಡನು.

ಆ ಮನೆಯ ಯಜಮಾನನ ಹೆಸರು ಶ್ರೀಕಾಂತ. ಅವನು ರಾಜಪುರೋಹಿತ. ಮಾತಿನ ಸಂದರ್ಭದಲ್ಲಿ ಶ್ರೀಕಾಂತನು ಕರಭನೊಂದಿಗೆ ತಮ್ಮ ಅರಸನ ವಿಚಿತ್ರ ಚರ್ಯೆಗಳನ್ನು ತಿಳಿಸಿ "ಏನೋ ಆಶ್ಚರ್ಯವಾಗಿದೆ. ಈಗ ಆ ಮುದುಕನಿಗೆ ಮತ್ತೆ ಮದುವೆಯಾಗುವ ಆಶೆಹತ್ತಿದೆ. ಸುಂದರ ಕನ್ಯೆಯನ್ನು ತಂದು ತನಗೆ ಮದುವೆ ಮಾಡುವಂತೆ ನನ್ನನ್ನು ಪೀಡಿಸುತ್ತಿದ್ದಾನೆ" ಎಂದ. ವಿಷಯವೆಲ್ಲವನ್ನೂ ಕೇಳಿದನಂತರ ಶರಭನೇ ನಾದರೂ ರಾಜನ ಶರೀರದಲ್ಲಿ ಪ್ರವೇಶಿ



ಸಿರ ಬಹುದೇನೋ ಎಂಬ ಅನುಮಾನವುಂಟಾಯಿತು ಕರಭನಿಗೆ. "ಅಣ್ಣಾ, ನಾನು ಹೇಳಿದಂತೆ ಮಾಡಿದರೆ ನಿಮ್ಮ ರಾಜನಿಗೆ ಹಿಡಿದಿರುವ ದುಷ್ಟಗ್ರಹವನ್ನು ನಾನು ಬಿಡಿಸುವೆನು. ಅದಕ್ಕಾಗಿ ನಾನು ಕೆಲವು ದಿನ ರಹಸ್ಯವಾಗಿ ನಿಮ್ಮ ಮನೆಯಲ್ಲಿದ್ದು ಇಂದ್ರಜಾಲ ಮಾಡುವೆನು. ಇಂದು ಸಾಯಂಕಾಲ ರಾಜನನ್ನು ಉದ್ಯಾನ ವನಕ್ಕೆ ಬರುವಂತೆ ಉಪಾಯ ಹೂಡು. ಅಲ್ಲೊಬ್ಬ ಅಪ್ಸರೆಯಂತಹ ಸ್ತ್ರೀಯಿರುವಳೆಂದು ಆತನಿಗೆ ಹೇಳು. ಹೀಗೆ ಆತನನ್ನು ಉಪಾಯವಾಗಿ ನಗರಕ್ಕೆ ಉತ್ತರ ದಿಕ್ಕಿನಲ್ಲಿರುವ ಶ್ಮಶಾನಕ್ಕೆ ಕರೆದುಕೊಂಡು ಬಾ. ಮುಂದಿನ ಕಾರ್ಯವನ್ನು ನಾನು ನೋಡಿಕೊಳ್ಳುವೆನು" ಎಂದು ಶ್ರೀಕಾಂತನೊಂದಿಗೆ ಹೇಳಿದ ಕರಭ.

ಶ್ರೀಕಾಂತನು ರಾಜನನ್ನು ಕಂಡು "ಮಹಾಪ್ರಭು, ಊರಾಚೆಯಿರುವ ನಮ್ಮ ಉದ್ಯಾನ ವನದಲ್ಲಿ ರಂಬೆಯಂತಹ ಕನ್ಯೆಯೊಬ್ಬಳು ಬಂದಿದ್ದಾಳೆ. ಆಕೆಯನ್ನು ತಾವು ಒಂದು ಬಾರಿ ನೋಡಬೇಕೆಂದು ನನ್ನ ಮನವಿ" ಎಂದ.

ಸ್ತ್ರೀ ಎಂದ ಕೂಡಲೇ ಕಾಸಿನಷ್ಟಿದ್ದ ರಾಜನ ಮುಖ ಮೊರದಷ್ಟಾಯಿತು. ರಾಜನು ಶ್ರೀಕಾಂತನೊಂದಿಗೆ ಅರಮನೆಯಿಂದ ಹೊರಬಿದ್ದನು. ಇಬ್ಬರೂ ರಹಸ್ಯವಾಗಿ ಶ್ಮಶಾನಕ್ಕೆ ಹೋದರು. ಅಲ್ಲಿ ಕರಭನು ತನ್ನ ಇಂದ್ರಜಾಲ ವಿದ್ಯೆಯಿಂದ ಸೃಷ್ಟಿಸಿದ ಅದ್ಭುತವಾದ ಉದ್ಯಾನ ಅವರಿಗೆ ಕಾಣಿಸಿತು. ಇನ್ನಷ್ಟು ದೂರ ಹೋಗಲು ಲತಾಗೃಹದಲ್ಲಿ ಅಪೂರ್ವ ಸುಂದರಿಯೊಬ್ಬಳು ವೀಣೆ ಮೀಟುತ್ತಿರುವುದು ರಾಜನಿಗೆ ಕಾಣಿಸಿತು.





ಕೂಡಲೇ ರಾಜನು ಆಕೆಯಬಳಿಗೆ ಓಡಲು ಪ್ರಯತ್ನಿಸಿ ಕೆಳಗೆ ಮುಗ್ಗರಿಸಿ ಬಿದ್ದನು. ಮತ್ತೆ ಎದ್ದು ನೋಡಲು ಉದ್ಯಾನವಾಗಲೀ, ಸ್ತ್ರೀಯಾಗಲೀ ಕಾಣಿಸಲಿಲ್ಲ.

"ಇದೇನಿದು ಮಾಯೆ" ಎಂದ ರಾಜ.

"ಮಹಾರಾಜ, ನೀವು ಆ ಸ್ತ್ರೀಯ ಸೌಂದರ್ಯವನ್ನು ಕಂಡು ಮೂರ್ಛಿತರಾದಿರಿ. ನಾನು ನಿಮ್ಮನ್ನು ಅರಮನೆಗೆ ತಲುಪಿಸುತ್ತಿರುವಾಗ ನಿಮಗೆ ಪ್ರಜ್ಞೆ ಬಂತು. ಇಂದು ಹೊತ್ತಾಯಿತು. ನಾಳೆ ಸಾವಕಾಶವಾಗಿ ಆ ಸ್ತ್ರೀಯೊಂದಿಗೆ ಮಾತನಾಡುವಿರಂತೆ" ಎಂದು ಶ್ರೀಕಾಂತನು ರಾಜನನ್ನು ಸಮಾಧಾನ ಪಡಿಸಿದನು.

ರಾಜನು ಮಂತ್ರಿಗಳನ್ನು ಕುರಿತು "ಸಚಿವರೇ, ಊರಿಗೆ ಉತ್ತರದಲ್ಲಿರುವ ನಮ್ಮ ಉದ್ಯಾನದಲ್ಲಿರುವ ವನಪಾಲಕರನ್ನು ಕರೆಯಿಸಿರಿ. ಅಲ್ಲಿರುವ ಮಹಿಳೆಗೆ ಯಾವ ಕೊರತೆಯೂ ಉಂಟಾಗದಂತೆ ನೋಡಿಕೊಳ್ಳುವಂತೆ ನಾನೇ ಸ್ವಂತ ಎಚ್ಚರಿಕೆ ಕೊಡಬೇಕು" ಎಂದ.

ಮಂತ್ರಿಗಳು ದಿಗ್ಭ್ರಾಂತರಾದರು. "ಮಹಾಪ್ರಭು, ನಮ್ಮ ನಗರದ ಉತ್ತರಭಾಗದಲ್ಲಿ ಉದ್ಯಾನವನವೇ ಇಲ್ಲದಿರುವಾಗ ವನಪಾಲಕನೆಲ್ಲಿಂದ ಬರಬೇಕು?" ಎಂದು ಕೇಳಿದರು.

ರಾಜನು ಅವರನ್ನು ತಾತ್ಸಾರದಿಂದ ನೋಡಿ "ನಾನು ಸ್ವಂತ ನೋಡಿಬಂದರೆ ಇಲ್ಲವೆಂದು ಸಾಧಿಸುವಿರಾ? ನಿಮ್ಮಿಂದ ಯಾವ ಕೆಲಸವೂ ಸಾಧ್ಯವಿಲ್ಲ. ನನಗೆ ಶ್ರೀಕಾಂತ ಹೊರತು ಬೇರೆ ಸ್ನೇಹಿತರಿಲ್ಲ." ಎಂದ ಬೇಸರದಿಂದ.

ಇಷ್ಟರಲ್ಲಿ ಶ್ರೀಕಾಂತನು ಮನೆಗೆ ಹೋಗಿ ಕರಭನೊಂದಿಗೆ ನಡೆದುದನ್ನೆಲ್ಲಾ ಹೇಳಿದನು. ರಾಜನ ಶರೀರದಲ್ಲಿ ಶರಭನಿರುವನೆಂಬುದು ಖಚಿತವಾಯಿತು. ಅವನು ಆ ರಾತ್ರಿ ಶ್ರೀಕಾಂತನ ಸಹಾಯದಿಂದ ರಾಣಿಯನ್ನು ನೋಡಲು ಹೋದನು. ಅಲ್ಲಿ ರಾಜಕುಮಾರಿ ಕೀರ್ತಿಸೇನೆ ಸಹ ಇದ್ದಳು. ಕರಭನು ರಾಣಿಯೊಂದಿಗೆ "ಅಮ್ಮಾ, ಮಹಾರಾಜರ ಕಳೇಬರದಲ್ಲಿ ಶರಭನೆಂಬುವನು ಪ್ರವೇಶಿಸಿರುವನು. ನನ್ನ ಕೈಚಳಕದಿಂದ ಅವನನ್ನು ಓಡಿಸುವೆನು" ಎಂದು ಹೇಳಿದ. ಆದಕ್ಕೆ ಆಕೆ ಸಮ್ಮತಿಸಿದಳು.

ಕರಭನು ರಾಣೀವಾಸಕ್ಕೆ ಆಗಾಗ್ಗೆ ಬಂದು ಹೋಗಲು ಅನುಮತಿ ಸಿಕ್ಕಿತು. ಕೀರ್ತಿಸೇನೆಯನ್ನು ನೋಡುತ್ತಿದ್ದಂತೆ ಆಕೆಯನ್ನು ವಿವಾಹ



ವಾಗಬೇಕೆಂಬ ಅಭಿಲಾಷೆ ಅವನಲ್ಲಿ ತೀವ್ರ ವಾಗುತಿತ್ತು. ಒಂದು ದಿನ ಕರಭನು ಶ್ರೀಕಾಂತ ನೊಂದಿಗೆ "ಅಣ್ಣಾ, ನನಗೆ ಹೇಗಾದರೂ ರಾಜ ಕುಮಾರಿಯನ್ನು ಕೊಟ್ಟು ವಿವಾಹ ಮಾಡಿಸಿದೆ ಯಾದರೆ, ನನ್ನ ಇಂದ್ರಜಾಲ ವಿದ್ಯೆಯನ್ನು ನಿನಗೆ ಧಾರೆ ಎರೆಯುವೆನು." ಎಂದ.

ಇಂದ್ರಜಾಲವನ್ನು ಕಣ್ಣಾರೆ ಕಂಡ ಶ್ರೀಕಾಂತ ನಿಗೆ ಆ ವಿದ್ಯೆ ಕಲಿಯಬೇಕೆಂಬ ಆಶೆ ಪ್ರಬ ಲಿಸಿತು. ರಾಜನು ತನ್ನ ಹಿಡಿತದಲ್ಲಿದ್ದ ಕಾರಣ ಒಂದು ದಿನ ರಾಜನ ಹತ್ತಿರ ಹೋಗಿ "ರಾಜನೇ ನಾವು ನೋಡಿದ ಅಪ್ಸರೆ ನಿಮ್ಮ ಸ್ವಾಧೀನವಾಗ ಬೇಕಾದರೆ ನಮಗೊಬ್ಬ ಬ್ರಾಹ್ಮಣ ತರುಣನ ಸಹಾಯಬೇಕು. ತಮ್ಮ ಮಗಳನ್ನು ಅವನಿಗೆ ಕೊಟ್ಟು ವಿವಾಹಮಾಡಿದ ಹೊರತು ಅವನು ಸಹಾಯ ಮಾಡುವುದಿಲ್ಲವಂತೆ. ತಮ್ಮ ಅಭಿ ಪ್ರಾಯವೇನು?" ಎಂದು ಕೇಳಿದ.

"ಓ, ಸರಿ. ಮದುವೆಯ ಸಿದ್ಧತೆಗಳಾಗ ಲೆಂದು ಮಂತ್ರಿಗಳಿಗೆ ಹೇಳಿ" ಎಂದ ರಾಜ.

ತನ್ನ ಮಗಳ ವಿವಾಹ ಪ್ರಯತ್ನಗಳಾಗು ತ್ತಿರುವುದೆಂದೂ, ಮುಹೂರ್ತವನ್ನೂ ಸಹ ನಿಶ್ಚ ಯಿಸಿದ್ದಾಯಿತೆಂದೂ ರಾಣಿಗೆ ತಿಳಿಯಿತು. ಈ ಮದುವೆ ಪ್ರಯತ್ನಗಳಿಗೆ ಶ್ರೀಕಾಂತನೇ ಕಾರಣವೆಂದೂ ಆಕೆ ಊಹಿಸಿದಳು. ಆದರೆ ಮದುಮಗ ಯಾರೋ ಆಕೆಗೆ ತಿಳಿಯಲಿಲ್ಲ.

ಈ ರಹಸ್ಯವನ್ನು ತಿಳಿದುಕೊಳ್ಳಲು ರಾಣಿ ಶ್ರೀಕಾಂತನನ್ನು ಕರೆಯ ಕಳುಹಿಸಿ, "ಶ್ರೀಕಾಂತ, ರಾಜಕುಮಾರಿಯನ್ನು ಯಾರಿಗೋ ಕೊಟ್ಟು ವಿವಾಹಮಾಡಲು ಸಿದ್ಧತೆಗಳಾಗುತ್ತಿರುವುದೆಂದು ತಿಳಿದುಬಂತು. ನನ್ನೊಂದಿಗೆ ಒಂದು ಮಾತಾ ದರೂ ಹೇಳಬಾರದಿತ್ತೇ. ಅವಳನ್ನು ನಿನಗೆ ಕೊಟ್ಟು ವಿವಾಹಮಾಡಲೆಣಿಸಿದ್ದೆ. ಹೀಗೇಕೆ ಮಾಡಿದೆ" ಎಂದು ಕೇಳಿದಳು.

ಶ್ರೀಕಾಂತನು ತನ್ನ ಅಚಾತುರ್ಯವನ್ನು ಅರಿತು ಪಶ್ಚಾತ್ತಾಪಹೊಂದಿ "ಅಮ್ಮಾ ನಾ ನೇನು ಮಾಡಲಿ; ಕರಭನೆಂಬುವನು ನಮ್ಮ ರಾಜ ನನ್ನು ಹಿಡಿದಿರುವ ನೀಚನನ್ನು ತನ್ನ ಶಕ್ತಿಯಿಂದ ಓಡಿಸುವುದಾಗಿ ಹೇಳಿದ. ಆದರೆ ಅವನಿಗೆ ಕೀರ್ತಿಸೇನೆಯನ್ನು ವಿವಾಹವಾಗುವ ದುರ್ಬುದ್ಧಿ ಜನಿಸಿತು. ಅವನು ತನ್ನ ಇಂದ್ರಜಾಲ ವಿದ್ಯೆ ಯನ್ನು ನನಗೆ ಕೊಡುವ ಷರತ್ತಿನಮೇಲೆ ಈ ವಿವಾಹಮಾಡಿಸಲು ಒಪ್ಪಿಕೊಂಡೆ. ಆ ವಿದ್ಯೆ

ನನಗೆ ಲಭಿಸಿದನಂತರ ಮಹಾರಾಜರನ್ನು ದುಷ್ಟಗ್ರಹದಿಂದ ಬಿಡಿಸಲು ಯೋಚಿಸಿದ್ದೆ. ನಮ್ಮ ರಾಜ್ಯದ ಕ್ಷೇಮಕ್ಕಾಗಿ ಈ ಕೆಲಸ ಮಾಡಿದೆ. ಅನ್ಯಥಾಭಾವಿಸಲಾಗದು" ಎಂದ.

"ಹುಚ್ಚ, ರಾಜನ ವಿಷಯ ಸರಿಪಡಿಸಿದ ನಂತರ ಮುಹೂರ್ತವಿಡುವುದಾಗಿ ಹೇಳಲಿಲ್ಲ ವೇಕೆ? ಈಗಲಾದರೂ ಮಿಂಚಿಹೋದುದೇನಿಲ್ಲ. ಮುಹೂರ್ತದೊಳಗೆ ತನ್ನ ಕೆಲಸ ಮುಗಿಸು ವಂತೆ ಒತ್ತಾಯಪಡಿಸು" ಎಂದಳು ರಾಣಿ.

ಕೀರ್ತಿಸೇನೆ ತನ್ನ ತಾಯಿಯಿಂದ ನಡೆದುದನ್ನೆಲ್ಲಾ ಕೇಳಿ ತಿಳಿದುಕೊಂಡಳು. ಆಕೆ ತನ್ನ ಚೇಟಿಯರನ್ನು ಕರೆದು ಅವರೊಂದಿಗೆ ಏನೋ ಹೇಳಿ ಕರಭನ ಬಳಿಗೆ ಕಳುಹಿಸಿದಳು. ಆ ಚೇಟಿಯರಲ್ಲೊಬ್ಬಳು ಕರಭನ ಬಳಿಗೆ ಹೋಗಿ ನೀನು ಆಕೆಯನ್ನು ವಿವಾಹವಾಗಲಿರುವೆಯೆಂದು ಕೇಳಿ ರಾಜಕುಮಾರಿ ಆನಂದದಿಂದ ಮೈಮರೆತಿರುವಳು. ಆಕೆ ಒಪ್ಪಲಾರಳೆಂದು ನೀನು ಅನುಮಾನಿಸಿ ರಹಸ್ಯವಾಗಿರಲು ಪ್ರಯತ್ನಿಸುತ್ತಿರಬಹುದು. ಆದರೆ ನಿನ್ನನ್ನು ನೋಡಿದಾಕ್ಷಣದಿಂದ ನಿನ್ನಲ್ಲಿ ಅನುರಾಗಪೂರಿತಳಾಗಿರುವಳು ರಾಜಕುಮಾರಿ. ಆದರೆ ನೀ ನೊಂದು ತಪ್ಪು ಕೆಲಸಮಾಡಿದೆ. ನಿನ್ನ ಇಂದ್ರಜಾಲವಿದ್ಯೆ ಆ ಶ್ರೀಕಾಂತನಿಗೇಕೆ ಕೊಡಲೊಪ್ಪಿದೆ? ಅವನು ಕೈಹಾಕದಿದ್ದರೆ ನಿನ್ನ ಮದುವೆ ನಿಂತುಹೋಗುವುದೇ?" ಎಂದು ಕೆಣಕಿದಳು.

ಕರಭನು ಕೈಕೈ ಹಿಸುಕಿಕೊಂಡು "ಮಾತು ಕೊಟ್ಟುಬಿಟ್ಟೆನಲ್ಲಾ" ಎಂದು ಪರಿತಪಿಸಿದ. "ಕಾರ್ಯ ಕೈಮೀರಿಲ್ಲ. ಇಂದೋ ನಾಳೆಯೋ



ರಾಜನನ್ನು ಹಿಡಿದಿರುವ ಗ್ರಹವನ್ನು ಓಡಿಸಿ, ನಿನ್ನ ಇಂದ್ರಜಾಲ ವಿದ್ಯೆಯನ್ನು ನಿನ್ನ ಹೆಂಡತಿಯ ಬಳಿ ಜೋಪಾನಮಾಡು. ಶ್ರೀಕಾಂತನು ನಿನ್ನನ್ನೇನೂ ಮಾಡಲಾರ" ಎಂದಳು.

ಸ್ವಲ್ಪ ಹೊತ್ತಿನನಂತರ ಕರಭನ ಬಳಿಗೆ ಶ್ರೀಕಾಂತನು ಬಂದು "ಇನ್ನು ವಿಳಂಬ ಮಾಡಿದೆಯೆಂದರೆ ನಮ್ಮಿಬ್ಬರ ಮರ್ಯಾದೆ ಉಳಿಯುವುದಿಲ್ಲ. ನೀನು ಕೂಡಲೇ ರಾಜನನ್ನು ಹಿಡಿದ ಶರಭನನ್ನು ಹೊರಗಟ್ಟು, ನಿನಗೆ ವಿವಾಹ ಆಯಿತೆಂದೇ ತಿಳಿ" ಎಂದ.

ಕರಭನು ಆ ದಿನವೇ ಮತ್ತೆ ಇಂದ್ರಜಾಲ ಹೂಡಿದ. ಅಂದೇ ಒಬ್ಬ ಗೊಲ್ಲರವನು ಹಾವು ಕಡಿದು ಸತ್ತುಹೋಗಲು ಆ ಶರೀರವನ್ನು ತನ್ನ ವಿದ್ಯೆಯ ಪ್ರಭಾವದಿಂದ ಅಪಹರಿಸಿ, ಒಂದು ಕಡೆ ಅವಿತಿಟ್ಟನು. ಆ ಸಾಯಂಕಾಲ ಮತ್ತೆ ಉದ್ಯಾನವನವನ್ನು ಸೃಷ್ಟಿಸಿ ಅದರಲ್ಲಿ ಮಾಯಾಸ್ತ್ರೀಯನ್ನಿಟ್ಟು ಆಕೆಯ ಪಕ್ಕದಲ್ಲಿ ಗೊಲ್ಲಯುವಕನ ಶರೀರವನ್ನಿಟ್ಟನು. ಶ್ರೀಕಾಂತನು ರಾಜನನ್ನು ಉದ್ಯಾನವನಕ್ಕೆ ಕರೆದುಕೊಂಡು ಬಂದನು. ಅವರು ಹೋಗುವ ವೇಳೆಗೆ ಆ ಸ್ತ್ರೀ ಗೊಲ್ಲಯುವಕನ ಶರೀರದ ಪಕ್ಕದಲ್ಲಿ ಕುಳಿತು ಅಳುತ್ತಿದ್ದಳು. "ಏನಿದು? ಯಾರಿವನು? ಅಳುತ್ತಿರುವೆ ಯಾದರೂ ಏಕೆ?" ಎಂದು ರಾಜನು ಆಕೆಯನ್ನು ಕೇಳಿದನು. "ಏನು ಹೇಳಲಿ ಪ್ರಭು. ಇವನು ನನ್ನ ನೌಕರ. ನನಗೆ ನನ್ನ ತಂದೆ ಕೊಟ್ಟ ಹಣವನ್ನೆಲ್ಲಾ ಬಚ್ಚಿಟ್ಟು ಕಾಪಾಡುತ್ತಿದ್ದ. ಅಕಸ್ಮಾತ್ ಹಾವು ಕಡಿದು ಸತ್ತುಹೋದ. ಹಣವೆಲ್ಲಿರುವ ವಿಷಯ ನನಗೆ



ತಿಳಿಯದು. ಆ ರಹಸ್ಯ ತಿಳಿದುಕೊಳ್ಳಬೇಕು. ಇವನಿಗೆ ಒಂದೆರಡು ನಿಮಿಷ ಪ್ರಾಣ ಬಂದರೂ ನನ್ನ ಕಾರ್ಯ ಫಲಿಸುವುದು " ಎಂದಳು.

" ಈ ಮಾತ್ರಕ್ಕೇ ಚಿಂತಿಸಬೇಡ. ನಾ ನಿವ ನನ್ನು ಈಗಲೇ ಬದುಕಿಸುವೆನು." ಎಂದು ರಾಜನು ಶರೀರದಲ್ಲಿದ್ದ ಶರಭನು ಆ ಶರೀರವನ್ನು ತ್ಯಜಿಸಿ ಗೊಲ್ಲರವನ ಶರೀರದಲ್ಲಿ ಪ್ರವೇಶಿದನು. ಆ ಸಮಯದಲ್ಲಿ ಅಲ್ಲಿ ಅದೃಶ್ಯನಾಗಿದ್ದ ಕರಭನು ರಾಜನ ಶರೀರವನ್ನು ಖಡ್ಗದಿಂದ ಎರಡು ತುಂಡುಮಾಡಿದನು. ಮರುಕ್ಷಣವೇ ಉದ್ಯಾನ, ಅಳುತ್ತಿದ್ದ ಸ್ತ್ರೀಮೂರ್ತಿ ಮಾಯವಾಗಿ ಶ್ರೀಕಾಂತ, ಕರಭ ಮತ್ತು ಗೊಲ್ಲರವನ ರೂಪ ದಲ್ಲಿದ್ದ ಶರಭರು ಉಳಿದರು.

ಶ್ರೀಕಾಂತ ಕರಭರು ಗೊಲ್ಲ ಯುವಕನನ್ನು ಬಂಧಿಸಿದರು. "ಇನ್ನು ನಿನ್ನ ಇಂದ್ರಜಾಲ ವಿದ್ಯೆ ನನಗೆ ಒಪ್ಪಿಸು" ಎಂದ ಶ್ರೀಕಾಂತ. "ರಾಜಕುಮಾರಿಯ ಕೊರಳಿಗೆ ತಾಳಿಕಟ್ಟಿದ ಮರುಕ್ಷಣವೇ ನಿನಗೊಪ್ಪಿಸುವೆನು" ಎಂದನು.

ಈರ್ವರೂ ಗೊಲ್ಲರವನನ್ನು ಕರೆದುಕೊಂಡು ರಾಣಿಯ ಮುಂದೆ ನಿಲ್ಲಿಸಿ "ಮಹಾರಾಣಿ, ಮಹಾಪ್ರಭುಗಳ ಶರೀರದಲ್ಲಿ ಪ್ರವೇಶಿಸಿದ ಧೂರ್ತನು ಈಗ ಗೊಲ್ಲರವನ ಶರೀರದಲ್ಲಿ ಪ್ರವೇಶಿಸಿರುವನು. ಇವನಿಗೆ ಉಚಿತ ಶಿಕ್ಷೆವಿಧಿಸಿ" ಎಂದರು. ಕೂಡಲೇ ಗೊಲ್ಲರವನನ್ನು ಸೆರೆ ಮನೆಗೆ ಕಳಹಿಸಲಾಯಿತು.

ನಂತರ ಕರಭನು ಕೀರ್ತಿ ಸೇನೆಯ ಬಳಿಗೆ ಹೋಗಿ "ಇದು ನನ್ನ ಇಂದ್ರಜಾಲ ವಿದ್ಯೆ. ಇನ್ನು ಉಳಿದಿರುವುದು ನಮ್ಮಿಬ್ಬರ ವಿವಾಹ" ಎಂದ. ಆಕೆ ಅವನ ಹತ್ತಿರದಿಂದ ಇಂದ್ರಜಾಲ ವಿದ್ಯೆಯನ್ನು ಪಡೆದನಂತರ ಮರೆಯಲ್ಲಿ ಅಡಗಿದ್ದ ನೌಕರನನ್ನು ಕರೆದು "ಈ ಆಶಾಪಾತಕನನ್ನು ಸೆರೆ ಮನೆಗೊಯ್ಯಿರಿ" ಎಂದಳು.

ಕರಭನು ಸೆರೆಯಾದನೆಂದು ತಿಳಿದಕೂಡಲೇ ಶ್ರೀಕಾಂತನು ತಾನೇ ರಾಜಕುಮಾರಿಯನ್ನು ವಿವಾಹವಾಗುವ ಅವಕಾಶ ಸಿಕ್ಕಿತೆಂದು ನೆನೆದು ಲಗುಬಗನೆ ಅಂತಃಪುರಕ್ಕೆ ಬಂದನು.

ಅವನನ್ನೂ ಕಂಡ ಕೂಡಲೇ ರಾಜಭಟರು ಬಂಧಿಸಿ ಸೆರೆಮನೆಗೆ ಕರೆದುಕೊಂಡುಹೋದರು.

ಹೀಗೆ ದುರಾಶೆಪಟ್ಟ ಶರಭ, ಕರಭ ಮತ್ತು ಶ್ರೀಕಾಂತರು ಕಾರಾಗೃಹವನ್ನು ಸೇರಿದರು.



# ನಾವಿಕ ಸಿಂದಬಾದ್

ನಾವಿದ್ದ ಹಡಗು ಎರಡು ಹಗಲು ಎರಡು ರಾತ್ರಿ ಗಾಳಿಯ ಹೊಡೆತಕ್ಕೆ ಹೊಡೆದುಕೊಂಡು ಹೋಗಿ ಮತ್ತೊಂದು ದ್ವೀಪವನ್ನು ತಲುಪಿತು. ನಮ್ಮ ಆಗಿನ ಸ್ಥಿತಿಯನ್ನು ನೆನೆಸಿಕೊಂಡರೆ ಈಗಲೂ ಮೈ ನಡಗುವುದು. ನಾವೆಲ್ಲಾ ಈಗಲೋ ಆಗಲೋ ಸಾಯುವ ಸ್ಥಿತಿಯಲ್ಲಿದ್ದೆವೆಂದರೆ ನಂಬಿ. ಆ ದ್ವೀಪವನ್ನು ಸೇರಿಕೊಂಡಕೂಡಲೇ ಅಲ್ಲಿದ್ದ ಫಲಗಳನ್ನು ತಿಂದು, ನೀರು ಕುಡಿದು ತುಸಹೊತ್ತು ಸುಧಾರಿಸಿಕೊಂಡು ಎತ್ತರವಾದ ಮರವನ್ನೇರಿದೆವು. ಅಷ್ಟು ಹೊತ್ತಿಗಾಗಲೇ ಕತ್ತಲಾಯಿತು. ನಾವೆಲ್ಲಾ ಆ ಮರದ ಮೇಲೆಯೇ ಮಲಗಿದೆವು.

ಬೆಳಗ್ಗೆ ನಾವು ಕಣ್ಣು ತೆರೆದಕೂಡಲೇ ನಮಗೊಂದು ಭೀಕರ ನೋಟ ಕಾಣಿಸಿತು. ನಾವು ಹತ್ತಿದ್ದ ಮರದ ಬುಡದಷ್ಟು ಗಾತ್ರದ ಒಂದು ಭಯಂಕರ ಸರ್ಪ ಗುಹೆಯಂತೆ ಬಾಯಿ ತೆರೆದುಕೊಂಡು ನಮ್ಮಕಡೆಗೆ ಬರುತ್ತಿತ್ತು. ಅದು ನಮ್ಮನ್ನು ನೋಡಿದಕೂಡಲೇ ಹೆಡೆಯೆತ್ತಿ, ನನ್ನೊಂದಿಗಿದ್ದ ಒಬ್ಬ ವರ್ತಕನನ್ನು ಕಬಳಿಸಿ ಮರದಿಂದ ಸರಸರನೆ ಕೆಳಕ್ಕೆ ಇಳಿದು ಹೋಯಿತು.

ಅದು ಹೋದನಂತರ ನಾನು ಮತ್ತು ನನ್ನ ಸಂಗಡಿಗನೂ ಮರದಿಂದ ಇಳಿದು ಫಲಗಳನ್ನು ತಿಂದು, ನೀರು



CHITRA

ಕುಡಿದು, ಆ ದ್ವೀಪದಲೆಲ್ಲಾ ಹುಡುಕಾಡಿ ಬಹಳ ಎತ್ತರವಾದ ಮತ್ತೊಂದು ಮರವನ್ನೇರಿ ಕುಳಿತು, ಆ ರಾತ್ರಿ ಅಲ್ಲೇ ನಿದ್ದೆಮಾಡಿದೆವು. ಆದರೆ ಬೆಳಗಾಗುವವೇಳೆಗೆ ಆ ದುಷ್ಟಸರ್ಪ ನಾವಿದ್ದಲ್ಲಿಗೆ ಸರಸರನೆ ಹರಿದು ಬಂದು, ನನ್ನ ಸಂಗಡಿಗನನ್ನು ನುಂಗಿ ಹೊರಟುಹೋಯಿತು.

ಆ ನಿರ್ಜನ ಪ್ರದೇಶದಲ್ಲಿ ನಾನೊಬ್ಬನೇ ಉಳಿದೆ. ನಾವು .ರಾಕ್ಷಸನಿಂದ ಪಾರಾದುದು ಈ ಸರ್ಪಕ್ಕೆ ಆಹುತಿಯಾಗಲೋಸುಗವೇ? ಛಿ, ಇದಕ್ಕಿಂತಲೂ ಆತ್ಮಹತ್ಯೆ ಮಾಡಿಕೊಳ್ಳುವುದು ಉಚಿತ ಎಂದುಕೊಂಡು ಸಮುದ್ರದಕಡೆ ಓಡಿದೆ.

ಆದರೆ ಪ್ರಾಣದ ಮೇಲಿನ ಆಶೆ ಅಷ್ಟು ಸುಲಭವಾಗಿ ಹೋಗುವುದಿಲ್ಲ. ಸರ್ಪದಿಂದ ತಪ್ಪಿಸಿಕೊಳ್ಳಲು ನನಗೊಂದು ಉಪಾಯ ಹೊಳೆಯಿತು. ನಾನು ಸಮುದ್ರತೀರದಲ್ಲಿದ್ದ ಹಲಗೆಗಳನ್ನು ತಂದು, ಅವುಗಳನ್ನು ನಾಲ್ಕು ಕಡೆಯೂ ಅಡ್ಡವಿಟ್ಟು, ಅವುಗಳಮಧ್ಯೆ ಮಲಗಿ, ಮೇಲೊಂದು ಹಲಗೆಯನ್ನು ಮುಚ್ಚಿಕೊಂಡು ಆ ರಾತ್ರಿ ಕಳೆದೆ. ಹಾವು ಯಥಾಪ್ರಕಾರ ಅಲ್ಲಿಗೆ ಬಂತು. ನನ್ನನ್ನು ಹೊರಗೆಳೆಯಲು ವಿಶ್ವಪ್ರಯತ್ನಮಾಡಿ ವಿಫಲಹೊಂದಿ, ಎತ್ತಲೋ ಹೊರಟುಹೋಯಿತು.

ನಂತರ ನಾನು ಹೊರಬಿದ್ದು ಸಮುದ್ರತೀರಕ್ಕೆ ಹೋದೆ. ಸಮುದ್ರದಮೇಲೆ ದೂರದಲ್ಲಿ ಒಂದು ಹಡಗು ಬರುತ್ತಿರುವುದು ಕಾಣಿಸಿತು. ನಾನು ಹುಚ್ಚನಂತೆ ಕೂಗುತ್ತಾ ತಲೆರುಮಾಲನ್ನು ಬಿಚ್ಚಿ ಒಂದು ಮರದ ಕೊಂಬೆಗೆ ಕಟ್ಟಿ ಹಾರಿಸಿದೆ. ನನ್ನ ಅದೃಷ್ಟ ನೆಟ್ಟಗಿತ್ತು. ಹಡಗು ದ್ವೀಪದ



ಕಡೆ ಬಂದು ತೀರದಬಳಿ ಲಂಗರು ಹಾಕಿತು. ಹಡಗಿನ ಕಲಾಸಿಗಳು ನನ್ನನ್ನು ಹಡಗಿನಲ್ಲಿ ಹತ್ತಿಸಿಕೊಂಡರು.

ಹಡಗನ್ನೇರಿದಕೂಡಲೇ ಅವರು ನನಗೆ ತೊಟ್ಟುಕೊಳ್ಳಲು ಉತ್ತಮ ಉಡುಪುಗಳನ್ನು ಕೊಟ್ಟರು. ತಿನ್ನಲು ಮೃಷ್ಟಾನ್ನ ಭೋಜನ ಬಡಿಸಿದರು. ಬಹಳ ಬಳಲಿದ್ದೆನಾದುದರಿಂದ ಊಟವಾದಕೂಡಲೇ ಸುಖವಾಗಿ ನಿದ್ದೆಹೋದೆ. ಮೃತ್ಯುದೇವತೆಯನ್ನು ಕಂಡು ಹತಾಶನಾಗಿದ್ದ ನನ್ನಲ್ಲಿ ಮತ್ತೆ ನವಚೈತನ್ಯವುಂಟಾಯಿತು. ಅಲ್ಲಾಗೆ ಕೈಮುಗಿದೆ. ಕ್ರಮೇಣ ನಾನು ಮಾಮೂಲು ಮನುಷ್ಯನಾದೆ.

ನಮ್ಮ ಪ್ರಯಾಣ ಸುಖಕರವಾಗಿ ಸಾಗುತ್ತಿತ್ತು. ಕೊನೆಗೆ ನಾವು ಸಲಾಹಿತಾವೆಂಬ ದ್ವೀಪವನ್ನು ಸೇರಿಕೊಂಡೆವು. ರೇವಿನಲ್ಲಿ ಲಂಗರು ಹಾಕಿ ಸರಕುಗಳನ್ನು ಕೆಳಗಿಳಿಸಿದ ತಕ್ಷಣ ಹಡಗಿನಲ್ಲಿದ್ದ ವರ್ತಕರೆಲ್ಲ ವ್ಯಾಪಾರಮಾಡಲು ಕೆಳಗಿಳಿದರು. ಆಗ ಹಡಗಿನ ಸರಂಗ ನನ್ನಬಳಿಗೆ ಬಂದು "ತಮ್ಮಾ, ನೀನು ಕಡುಬಡವನಂತೆ ಕಾಣಿಸುವೆ. ಬಹಳ ಸಂಕಷ್ಟಗಳನ್ನು ಅನುಭವಿಸಿದುದಾಗಿ ಹೇಳಿದೆ. ಆದುದರಿಂದ ನಿನಗೊಂದು ಸಹಾಯ ಮಾಡುವೆನು. ನಿನ್ನನ್ನು ನಿನ್ನ ಗ್ರಾಮಕ್ಕೆ ಕರೆದೊಯ್ಯುವೆನು. ನನ್ನ ಹೆಸರು ಹೇಳಿಕೊಂಡು ಸುಖವಾಗಿ ಬಾಳು" ಎಂದ.

"ಅಯ್ಯಾ, ಯಾವ ಸಹಾಯ ಮಾಡಿದರೂ ನಾನು ನಿಮಗೆ ಸದಾ ಕೃತಜ್ಞನಾಗಿರುತ್ತೇನೆ" ಎಂದೆ ವಿನಯದಿಂದ. "ಹಾಗಾದರೆ ಕೇಳು. ಕೆಲವಾರು ವರ್ಷಗಳ ಕೆಳಗೆ ನಮ್ಮೊಂದಿಗೆ ಒಬ್ಬ





ವರ್ತಕ ಪ್ರಯಾಣಮಾಡುತ್ತಿದ್ದನು. ಆತನು ಒಂದು ದ್ವೀಪದಲ್ಲಿ ಇಳಿದನು. ಇಳಿದವ ಎತ್ತ ಹೋದನೋ ತಿಳಿಯಲಿಲ್ಲ. ನಂತರ ಆತನ ಸುಳಿವೇ ನಮಗೆ ಸಿಕ್ಕಲಿಲ್ಲ. ಆತನು ಜೀವಿಸಿದ್ದಾನೆಯೋ ಇಲ್ಲವೋ ನಾವರಿಯೆವು. ಆತನ ಸರಕೆಲ್ಲಾ ಕೊಟಾರದಲ್ಲಿ ಹಾಕಿದ್ದೇವೆ. ಅದೆಲ್ಲವನ್ನೂ ನಿನ್ನವಶಕ್ಕೆ ಒಪ್ಪಿಸುವೆನು. ಆ ಸರಕನ್ನು ಕೊಂಡೊಯ್ದು ವ್ಯಾಪಾರಮಾಡಿ, ಬಂದ ಹಣದಲ್ಲಿ ನೀನು ಸ್ವಲ್ಪ ತೆಗೆದುಕೊಂಡು, ಉಳಿದುದನ್ನು ನನ್ನ ಕೈಗೆ ಕೊಡು. ಅದನ್ನು ಆತನ ಬಂಧುಗಳಿಗೊಪ್ಪಿಸುವೆನು" ಎಂದ ಸರಂಗ.

"ಓ, ಅಷ್ಟುಮಾಡಿದರೆ ನನಗೆ ಜೀವದಾನ ಮಾಡಿದವರಾಗುವಿರಿ. ಈ ಪರಿಸ್ಥಿತಿಯಲ್ಲಿ ಅಷ್ಟು ನ್ಯಾಯವಾಗಿ ಹಣ ಸಂಪಾದಿಸುವುದಕ್ಕಿಂತಲೂ ಬೇರೇನು ಬೇಕು" ಎಂದೆ. ಸರಂಗ್ ಆಜ್ಞೆ ಮಾಡಲು ಕಲಾಸಿಗಳು ಸರಕಿನ ಬೇಲುಗಳನ್ನು ಹೊರಗೆ ತೆಗೆದರು.

ಸರಂಗ್ ಗುಮಾಸ್ತೆಯನ್ನು ಕೂಗಿ "ಇವುಗಳನ್ನೆಲ್ಲಾ ಪಟ್ಟಿಹಾಕು" ಎಂದ.

"ಅಪ್ಪಣೆ. ಯಾರ ಹೆಸರಲ್ಲಿ ಬರೆಯಲಿ?" ಎಂದು ಕೇಳಿದ ಗುಮಾಸ್ತ.

"ಈ ಸರಕೆಲ್ಲಾ ನಾವಿಕ ಸಿಂದಬಾದನದು. ಆದರೆ ಈಗ ಅದನ್ನು ಈತನ ಹೆಸರಿಗೆ ಬರೆದು ಬಿಡು. ಹೆಸರೇನೋ ಆತನನ್ನೇ ಕೇಳು" ಎಂದ ಸರಂಗ್.

"ನಾನೇ ನಾವಿಕ ಸಿಂದಬಾದ್" ಎಂದು ಸಂತೋಷ ತಡೆಯಲಾರದೆ ಗಟ್ಟಿಯಾಗಿ ಕಿರಿಚಿದೆ. ನಾನೊಂದುಸಾರಿ ಸರಂಗನನ್ನು ಮುಡಿಯಿಂದ ಅಡಿಯವರೆವಿಗೆ ಸೂಕ್ಷ್ಮವಾಗಿ ನೋಡಿದೆ. ಎರಡನೇ ಸಮುದ್ರಪ್ರಯಾಣದಲ್ಲಿ ನನ್ನ ವಿಷಯ ಮರೆತು ಹಡಗನ್ನು ಮುಂದೆ ಸಾಗಿಸಿಕೊಂಡು ಹೋದ ಸರಂಗ್ ಈತನೇ ಎಂದು ದೃಢವಾಯಿತು. ನಾನು ಸಂಭ್ರಮದಿಂದ "ನನ್ನ ಗುರುತು ಸಿಕ್ಕಲಿಲ್ಲವೇ? ನಾನು ನಿಜವಾಗಿ ನಾವಿಕ ಸಿಂದಬಾದ್. ಬಾಗದಾದ್ ವರ್ತಕ. ನನ್ನ ಕಥೆ ಕೇಳಿ ಸ್ವಲ್ಪ.

ನಾನು ಅನೇಕ ವರ್ಷಗಳ ಹಿಂದೆ ಇಂತಹ ದ್ವೀಪಕ್ಕೆ ಹೋಗಿ, ದುರದೃಷ್ಟವಶಾತ್ ಸಮಯಕ್ಕೆ ಸರಿಯಾಗಿ ಹಡಗನ್ನು ತಲುಪಲು ಅಶಕ್ತನಾದೆ. ಒಂದು ತೊರೆಯಪಕ್ಕದಲ್ಲಿ ಕುಳಿತು ಊಟಮಾಡಿ ಹಾಗೇ ತುಸ ಬೆನ್ನುಬಾಗಿಸಿದೆ.

ಕಣ್ಣು ಮುಚ್ಚಿದಕೂಡಲೇ ನಿದ್ದೆ ಹತ್ತಿತು. ನಿದ್ದೆಯಿಂದ ಎಚ್ಚರವಾಗುವ ವೇಳೆಗೆ ಹಡಗು ಬಹಳಷ್ಟು ದೂರ ಸಾಗಿಬಿಟ್ಟಿತ್ತು. ಆತರುವಾಯ ರತ್ನಗಳ ಪರ್ವತಕ್ಕೆ ಹೋದ ವರ್ತಕರು ನನ್ನನ್ನು ನೋಡಿದರು. ಅವರು ನನ್ನನ್ನು ಗುರುತಿಸಬಲ್ಲರು" ಎಂದೆ.

ನಾನು ಈ ಧೋರಣಿಯಲ್ಲಿ ಮಾತನಾಡುತ್ತಿರಲು ಒಬ್ಬ ವರ್ತಕನು ತನ್ನೊಂದಿಗೆ ತೆಗೆದುಕೊಂಡುಹೋಗಿದ್ದ ಸರಕನ್ನೆಲ್ಲಾ ಮಾರಿ, ಮತ್ತಷ್ಟು ಸರಕನ್ನು ತೆಗೆದುಕೊಂಡು ಹೋಗಲು ಹಡಗಿಗೆ ಬಂದನು. ನನ್ನನ್ನೊಮ್ಮೆ ತದೇಕ ದೃಷ್ಟಿಯಿಂದ ನೋಡಿ ಬೆರಗಾಗಿ ನನ್ನ ಕೈ ಹಿಡಿದು ಕುಲುಕುತ್ತಾ "ಅರೆ ಅಲ್ಲಾ. ನನ್ನ ಮಾತನ್ನು ಇವರೆಲ್ಲ ನಂಬಲಿಲ್ಲ. ಗಂಡಬೇರುಂಡ ಪಕ್ಷಿ ರತ್ನಗಳ ಕಣಿವೆಯಿಂದ ಒಬ್ಬ ಮನುಷ್ಯನನ್ನು ಮೇಲಕ್ಕೆ ತಂದಿತೆಂದೂ, ನಾನು ಕಣ್ಣಾರೆ ಕಂಡೆನೆಂದೂ ಹೇಳಿದರೆ ಎಲ್ಲರೂ ಸುಳ್ಳೆಂದು ಹಾಸ್ಯಮಾಡಿದರು. ಇದೋ, ಆ ಮನುಷ್ಯನೀತನೇ. ಸಿಂದಬಾದ್ ನಾವಿಕ. ನನಗೆ ಅಮೌಲ್ಯವಾದ ರತ್ನಗಳನ್ನು ಕೊಟ್ಟ ಧರ್ಮಾತ್ಮ" ಎಂದು ನನ್ನನ್ನು ಆಲಂಗಿಸಿಕೊಂಡನು. ಆಗ ಸರಂಗಿಗೆ ನನ್ನ ಪರಿಚಯು ಸಿಕ್ಕಿತು. ಆತನು ನನ್ನ ಕೈಗಳೆರಡನ್ನೂ ಹಿಡಿದುಕೊಂಡು ಪ್ರಾಣದೊಂದಿಗೆ ಆ ದ್ವೀಪದಿಂದ ಹೊರಬಿದ್ದುದಕ್ಕೆ ನನ್ನನ್ನು ಅಭಿನಂದಿಸಿದನು. ತರುವಾಯ ನನ್ನ ಸರಕುಗಳನ್ನೆಲ್ಲಾ ರೇವಿನಲ್ಲಿ ಇಳಿಸಲಾಯಿತು. ನಾನು ವ್ಯಾಪಾರಮಾಡಿ ಅಪಾರ ಲಾಭ ಸಂಪಾದಿಸಿದೆ.

ಸಲಾಹಿತದಿಂದ ಹೊರಟು ಸಿಂದೂದೇಶಕ್ಕೆ ಹೋದೆವು. ಅಲ್ಲಿಯೂ ವ್ಯಾಪಾರ ಮಾಡಿದೆವು. ಅಲ್ಲಿ ನಾನು ಅನೇಕ ವಿಚಿತ್ರವಾದ ಮೀನುಗಳನ್ನು ಕಂಡೆ. ಕೆಲವು ಹಸುವಿನಷ್ಟು ಎತ್ತರವಿದ್ದುವು, ಮತ್ತೆ ಕೆಲವು ಕತ್ತೆಯಷ್ಟು ಎತ್ತರವಿದ್ದುವು. ಇನ್ನು ಕೆಲವು ಮೀನುಗಳು ಪಕ್ಷಿಯಂತೆ ಹಾರುತ್ತಿದ್ದುವು. ಈ ರೀತಿ ನಾವು ಬಹುಕಾಲ ಸಮುದ್ರಯಾನ ಸಾಗಿಸಿ. ಕೊನೆಗೆ ಬಸ್ರಾ ಸೇರಿಕೊಂಡೆವು. ಅಲ್ಲಿಂದ ಮುಂದೆ ಪ್ರಯಾಣ ಮಾಡಿ ನನ್ನ ಸ್ವಸ್ಥಳವಾದ ಬಾಗದಾದ್ ನಗರವನ್ನು ತಲುಪಿ, ಬಂಧುಮಿತ್ರರನ್ನು ಸೇರಿಕೊಂಡೆ.

ಈ ಪ್ರಯಾಣದಲ್ಲಿ ಹೆಚ್ಚು ಲಾಭ ಬಂದಿತ್ತು.



# ಆನಂದ

ಪೂರ್ವಕಾಲದಲ್ಲಿ ಉತ್ತರದೇಶದಲ್ಲಿ ಒಬ್ಬ ಬ್ರಾಹ್ಮಣನಿದ್ದ. ಮಹಾಜ್ಞಾನಿ. ಚಿಕ್ಕತನದಲ್ಲೇ ಇಹಸುಖಗಳನ್ನು ವರ್ಜಿಸಿ ಸನ್ಯಾಸಿಯಾಗಿ ಹಿಮಾಲಯಕ್ಕೆ ಹೋಗಿ ತಪಸ್ಸು ಮಾಡತೊಡಗಿದ. ಆತನ ಕೀರ್ತಿ ನಾಲ್ಕು ದಿಕ್ಕುಗಳಿಗೂ ವ್ಯಾಪಿಸಿತು. ಐನೂರುಮಂದಿ ಶಿಷ್ಯರು ಅವನಬಳಿಯಲ್ಲಿ ಸೇರಿದರು. ಹೀಗೆ ಸೇರಿದವರಲ್ಲಿ ಮೊದಲನೆಯವನು ಒಬ್ಬ ರಾಜ. ಅವನೂ ಪ್ರಪಂಚದಮೇಲೆ ವಿರಕ್ತನಾಗಿ ಸನ್ಯಾಸಿಯಾದನು.

ಹಿಮಾಲಯದ ಮೇಲೆ ಹಿಮ ಬೀಳಲಾರಂಭಿಸಿದಾಗ ಸನ್ಯಾಸಿ ತನ್ನ ಶಿಷ್ಯರೊಂದಿಗೆ ಮೈದಾನ ಪ್ರಾಂತಗಳಿಗೆ ಇಳಿದುಬಂದು ಭಿಕ್ಷಾಟನೆ ಮಾಡುತ್ತಿದ್ದ. ಒಂದು ವರ್ಷ ಆತ ತನ್ನ ಶಿಷ್ಯರೊಂದಿಗೆ ಕಾಶೀರಾಜ್ಯಕ್ಕೆ ಬಂದ. ಕಾಶೀರಾಜನು ಸನ್ಯಾಸಿಗೂ ಅವನ ಶಿಷ್ಯರಿಗೂ ಒಳ್ಳೆಯ ಆತಿಥ್ಯವನ್ನಿತ್ತು ತನ್ನ ಬಳಿಯಲ್ಲೇ ಇಟ್ಟುಕೊಂಡ.

ಮಳೆಗಾಲ ಹೋಯಿತು. ಸನ್ಯಾಸಿ ಮತ್ತೆ ಹಿಮಾಲಯಕ್ಕೆ ಹೊರಟ. "ನೀವು ಹಿರಿಯರು. ಹಿಮಾಲಯದಲ್ಲಿದ್ದು ಏಕೆ ಕಷ್ಟಪಡುತ್ತೀರಿ? ನಿಮ್ಮ ಶಿಷ್ಯರನ್ನು ಕಳಿಸಿ ನೀವು ಇಲ್ಲೇ ಇರಿ. ನಿಮ್ಮ ತಪಸ್ಸಿಗೆ ಏನೂ ಭಂಗ ಬಾರದು" ಎಂದು ಕೇಳಿಕೊಂಡ ಕಾಶೀರಾಜ.

ಶಿಷ್ಯರೆಲ್ಲ ಹಿಮಾಲಯಕ್ಕೆ ಹೋದರು. ಸ್ವಲ್ಪಕಾಲದಮೇಲೆ ದೊಡ್ಡ ಶಿಷ್ಯನಿಗೆ ಗುರುವನ್ನು ನೋಡಬೇಕೆನಿಸಿತು.

ಅವನೊಬ್ಬನೇ ಹೊರಟು ಬಹಳ ದಿನ ಪ್ರಯಾಣಮಾಡಿ ಕಾಶೀರಾಜ್ಯಕ್ಕೆ ಬಂದು, ಸನ್ಯಾಸಿಯನ್ನು ನೋಡಿದ. ಗುರುಭಕ್ತಿ ಉಕ್ಕಿ ಆನಂದಬಾಷ್ಪ ಸುರಿಸಿದ. ತನ್ನ ಶಿಷ್ಯನನ್ನು ನೋಡಿ ಸನ್ಯಾಸಿಗೂ ಆನಂದವಾಯಿತು.

ಅವರಿಬ್ಬರೂ ಊಟ ತೀರಿಸಿ ಮಾತಾಡುತಿರುವಾಗ, ಸನ್ಯಾಸಿಯ ಪರ್ಣಶಾಲೆಗೆ ರಾಜನು ಬಂದನು. ಹಿರಿಯ ಶಿಷ್ಯನು ರಾಜನನ್ನು ನೋಡಿಕೂಡಾ ಏಳಲಿಲ್ಲ. ಅವನು ತನ್ಮಯನಾದಂತೆ "ಆನಂದ! ಆನಂದ!" ಎನ್ನತೊಡಗಿದ.

ಇದನ್ನು ನೋಡಿ ರಾಜನಿಗೆ ಸಿಟ್ಟು ಬಂತು. "ನಿಮ್ಮ ಶಿಷ್ಯ ಷಡ್ರಸಾನ್ನ ಉಂಡ ಹಾಗಿದೆ! ಆನಂದವನ್ನು ಹಿಡಿಸಲಾರದೆ ಹೋಗಿದ್ದಾನೆ!" ಎಂದ ರಾಜ.

"ರಾಜಾ, ನೀನು ತಪ್ಪು ತಿಳಿದೆ. ಇವನ ಆನಂದ ಊಟದಿಂದ ಉಂಟಾದ್ದಲ್ಲ. ಅವನುಕೂಡಾ ನಿನ್ನಹಾಗೆಯೇ ಒಮ್ಮೆ ರಾಜ. ಇಹಸುಖದಮೇಲೆ ವಿರಕ್ತನಾಗಿ ಸನ್ಯಾಸಿಯಾದವ. ಇವನ ಈ ಆನಂದವು ಕೋರಿಕೆಗಳನ್ನು ಅಡಗಿಸಿದ್ದರಿಂದ ಉಂಟಾದ್ದು, ಕೋರಿಕೆಗಳನ್ನು ತೀರಿಸಿಕೊಂಡದ್ದರಿಂದಲ್ಲ!" ಎಂದ ಸನ್ಯಾಸಿ.

# ಅಂತ್ಯಜನ ದಾನ



ತನ್ನ ಹಠವನ್ನು ಬಿಡದೆ ತ್ರಿವಿಕ್ರಮನು ಮರದ ಬಳಿಗೆ ಮತ್ತೆ ಹೋಗಿ, ಶವವನ್ನು ಕೆಳಗಿಳಿಸಿ, ಭುಜದಮೇಲೆ ಹಾಕಿಕೊಂಡು, ಶ್ಮಶಾನದತ್ತ ಮೌನವಾಗಿ ನಡೆಯ ತೊಡಗಿದನು. ಆಗ ಬೇತಾಳ ಅಂದಿತು: "ರಾಜನೇ, ನಿನ್ನ ದೀಕ್ಷೆ ಬಹಳ ಮೆಚ್ಚುವಂತಹದು. ಆದರೆ ಸತ್ಕಾರ್ಯ ಮಾಡುವಾಗಲೂ ದೀಕ್ಷೆಯುಳ್ಳವನಿಗೆ ಎಂತೆಂತಹ ತೊಂದರೆಗಳು ಎದುರಾಗುವುದೋ ನೀನರಿಯೆ. ಇದಕ್ಕೆ ಶೀಲಯಾಜಿ ಉದಾಹರಣೆ. ಅವನ ಕಥೆ ಹೇಳುವೆನು ಕೇಳು.

"ಬಹಳ ಕಾಲದ ಹಿಂದೆ ಗೌತಮಿ ನದಿ ತೀರದಲ್ಲಿ ಅಭಯಗಿರಿ ಎಂಬ ಗ್ರಾಮದಲ್ಲಿ ಶೀಲಯಾಜಿ ಎಂಬ ಬ್ರಾಹ್ಮಣೋತ್ತಮನಿದ್ದನು. ಆತನು ದಯಾಳು. ಭಕ್ತಿಸಂಪನ್ನ. ಆತನಿಗೆ ಮದುವೆಯಾಗಿರಲಿಲ್ಲ; ಸಂಸಾರದ ತಾಪತ್ರಯವೂ ಇರಲಿಲ್ಲ. ಅಲ್ಪಸ್ವಲ್ಪ ಆಸ್ತಿಪಾಸ್ತಿಯಿತ್ತು. ಆ ಆಸ್ತಿಯನ್ನು ಅನುಭವಿಸಲು ಸಂತತಿಯಿಲ್ಲವಾದ ಕಾರಣ ಅದನ್ನು ಅನೇಕ

ಸತ್ಕಾರ್ಯಗಳಿಗೆ ವಿನಿಯೋಗಿಸಲು ನಿಶ್ಚಯಿಸಿದನು. ತನ್ನ ಬಳಿಯಿದ್ದ ಹಣದಿಂದ ಅವನು ಒಂದು ರಾಮಾಲಯವನ್ನು ಕಟ್ಟಿಸಿದನು. ಅದರ ಬಳಿಯೇ ಒಂದು ಧರ್ಮಸತ್ರವನ್ನು ಕಟ್ಟಿಸಿದನು. ಇವೆರಡರ ನಿರ್ಮಾಣಕಾರ್ಯ ಮುಗಿಯುವ ಹೊತ್ತಿಗೆ ಅವನಬಳಿಯಿದ್ದ ಹಣವೆಲ್ಲಾ ಖರ್ಚಾಯಿತು. ಆದರೆ ಮುಂದೆ ಮಾಡಬೇಕಾದ ಕಾರ್ಯಗಳು ಅನೇಕವಿದ್ದುವು. ಆಲಯದಲ್ಲಿ ಅರ್ಚನೆಗಳು ನಡೆಯಬೇಕು; ಸತ್ರದಲ್ಲಿ ತಂಗುವವರಿಗೆ ಊಟದ ಸೌಕರ್ಯಗಳನ್ನು ಏರ್ಪಡಿಸಬೇಕು. ಸತ್ರದಲ್ಲಿ ಒಂದು ವೇದಪಾಠಶಾಲೆ, ಒಂದು ವಿದ್ಯಾಶಾಲೆಯು ಪದ್ಧತಿಗಳಾಗಬೇಕು. ಗ್ರಾಮದ ಹುಡುಗರಿಗೆ ಒಂದು ಶಾಲೆ ಕಟ್ಟಿಸಬೇಕು. ಆದರೆ ಇವುಗಳಿಗೆಲ್ಲಾ ಹಣಬೇಕು. ಈ ಕಾರ್ಯಗಳನ್ನು ಕಾರ್ಯಗತ ಮಾಡಲು ಚಂದಾ ಹಣ ವಸೂಲು ಮಾಡುವುದೊಂದೇ ಉಳಿದಿತ್ತು. ಆದರೆ ಆ ರೀತಿಮಾಡಲು ಶೀಲಯಾಜಿಗೇಕೋ ಸರಿದೋರಲಿಲ್ಲ. ಆದುದರಿಂದ ಅವನು ಸತ್ರದಲ್ಲಿ ಒಂದು ಗೋಲಕ, ಗುಡಿಯಲ್ಲಿ ಒಂದು ಗೋಲಕವಿಡಿಸಿದನು. ಸತ್ರಕ್ಕೆ ಬಂದ ಭಕ್ತಾದಿಗಳು, ಗುಡಿಗೆ ಹೋದ ಭಕ್ತಜನರು ತಮಗೆ ತೋರಿದುದನ್ನು ಆ ಹುಂಡಿಗಳಲ್ಲಿ ಹಾಕುತ್ತಿದ್ದರು.

ಗುಡಿಕಟ್ಟಿಸಿದ ವೇಳೆ ಒಳ್ಳೆಯದು. ಆ ಆಲಯದ ಪ್ರತಿಷ್ಠಾಪನಾ ಮೂರ್ತಿ ಶ್ರೀರಾಮನ ಅನುಗ್ರಹದಿಂದ ಆ ದೇವರಿಗೆ ಹರಕೆಹೊತ್ತ ಅನೇಕರ ಕೋರಿಕೆಗಳು ಈಡೇರುತ್ತಿದ್ದುವು. ಆಲ



ಯದ ಕೀರ್ತಿ ಹೆಚ್ಚಾದಂತೆ ಯಾತ್ರಿಕರ ಸಂಖ್ಯೆ, ಹುಂಡಿಗಳಲ್ಲಿ ಬೀಳುತ್ತಿದ್ದ ಮೊತ್ತಸಹ ಹೆಚ್ಚುತ್ತಲಿತ್ತು. ಆದರೆ ಅವುಗಳೊಂದಿಗೆ ಖರ್ಚು ವಿಪರೀತವಾಗಿ ಬೆಳೆಯುತ್ತಿತ್ತು. ಶೀಲಯಾಜಿ ತಾನು ನೆನೆಸಿಕೊಂಡಿದ್ದ ಸತ್ಕಾರ್ಯಗಗಳನ್ನು ಮಾಡಲು ಅಶಕ್ತನಾದನು. "ಏನು ಶೀಲಯಾಜಿಗಳೇ, ವೇದಪಾಠಶಾಲೆ ಎಂದು ಪ್ರಾರಂಭಿಸುವಿರಿ?" ಎಂದು ಒಬ್ಬ ಕೇಳಿದರೆ, ಮತ್ತೊಬ್ಬನು "ವೈದ್ಯಶಾಲೆ ಇನ್ನೂ ಪ್ರಾರಂಭಿಸಲಿಲ್ಲವೇಕೆ?" ಎಂದು ಕೇಳುವನು. ಆಗ ಶೀಲಯಾಜಿ "ಏನು ಮಾಡಲಪ್ಪಾ, ರಾಮದೇವರ ದಯ ಬರಲಿಲ್ಲ" ಎಂದು ಉತ್ತರಕೊಡುತ್ತಿದ್ದನು.

ಹೀಗಿರಲು ಒಂದು ದಿನ ಗುಡಿಯಲ್ಲಿದ್ದ ಗೋಲಕದಲ್ಲಿ ಯಾರೋ ಸಾವಿರ ವರಹಗಳನ್ನು



ಹಳದಿ ಬಣ್ಣದಬಟ್ಟೆಯಲ್ಲಿ ಗಂಟುಕಟ್ಟಿ ಹಾಕಿದ್ದರು. ಅದನ್ನು ಕಂಡು ಶೀಲಯಾಜಿ ಚಕಿತನಾದನು. ಅಭಯಗಿರಿ ಗ್ರಾಮದಲ್ಲಿ ಕೆಲವೇ ಜನ ಧನಿಕರಿದ್ದರು. ಅವರು ಎಂದಾದರೂ ನೂರು, ಇನ್ನೂರು ಕೊಡುವುದುಂಟು. ಅದರೆ ಇಷ್ಟೊಂದು ಭಾರಿಮೊತ್ತ ಕೊಡಬಲ್ಲ ದಾತ ನೆಟ್ಟಗೆ ಶೀಲಯಾಜಿಯ ಬಳಿಗೆ ಬಂದು ಕೊಟ್ಟುಹೋಗುತ್ತಿದ್ದನೇಹೊರತು ಈ ರೀತಿ ಗೋಲಕದಲ್ಲಿ ರಹಸ್ಯವಾಗಿ ಹಾಕುತ್ತಿರಲಿಲ್ಲ. ಯಾರು ಈ ಹಣವನ್ನು ಹುಂಡಿಯಲ್ಲಿ ಹಾಕಿದರು? ಅವರು ಅಜ್ಞಾತರಾಗಿರಲು ಕಾರಣವೇನು? ಎಂಬ ಪ್ರಶ್ನೆಗಳು ಶೀಲಯಾಜಿಯ ಮನವನ್ನು ಕೊರೆಯುತ್ತಿದ್ದುವು.

ರಹಸ್ಯವಾಗಿರಲು ಇಚ್ಛಿಸುವವರನ್ನು ಬಯಲಿಗೆಳೆಯುವುದು ಅನುಚಿತವೆಂದು ಶೀಲ



ಯಾಜಿ ಆ ಹಣದಗಂಟಿನ ವಿಷಯ ಯಾರೊಂದಿಗೂ ಹೇಳಲಿಲ್ಲ. ಆ ಹಣ ಗುಡಿಯ ಗೋಲಕದಲ್ಲಿದ್ದ ಕಾರಣ ಅದನ್ನು ದೇವಾಲಯಕ್ಕೆ ವಿನಿಯೋಗಿಸಲು ನಿರ್ಧರಿಸಿದನು. ಸ್ವಲ್ಪ ಭಾಗವನ್ನು ಅರ್ಚಕನ ಮನೆಯ ದುರಸ್ತಿಗಾಗಿ ವೆಚ್ಚಮಾಡಿದನು. ಉಳಿದ ಹಣದಿಂದ ದೇವರಿಗೆ ಚಿನ್ನದ ತೊಡಿಗೆ ಮಾಡಿಸಿದನು. ಸಾಲಂಕೃತ ದೇವರನ್ನು ಕಂಡು ಎಲ್ಲರೂ ಸಂತೋಷಪಟ್ಟರು.

ಕೆಲವು ದಿನಗಳನಂತರ ಸತ್ರದಲ್ಲಿದ್ದ ಹುಂಡಿಯಲ್ಲಿ ಎರಡು ಸಾವಿರ ವರಹಗಳ ಮೂಟೆ ಬಿದ್ದಿತ್ತು. ಶೀಲಯಾಜಿಯ ಆಶ್ಚರ್ಯ ಇಮ್ಮಡಿಸಿತು. ಗ್ರಾಮಸ್ಥರಲ್ಲಿ ಯಾರೋ ತನ್ನ ಅಸಹಾಯಕತೆಯನ್ನು ಕಂಡು ಈ ರೀತಿ ಹಣವನ್ನು ಆಗಾಗ್ಗೆ ಒದಗಿಸುತ್ತಿರುವರು ಎಂದು ಅಂದುಕೊಂಡ ಶೀಲಯಾಜಿ. ಆದರೆ ಆ ವ್ಯಕ್ತಿಯನ್ನು ತಿಳಿಯುವ ಕುತೂಹಲವುಂಟಾಯಿತು. ಆತನಿಗೆ ಮುಖತಃ ತನ್ನ ಕೃತಜ್ಞತೆಯನ್ನು ಸಲ್ಲಿಸುವ ಬಯಕೆಯಾಯಿತು.

ವೇದಪಾಠಶಾಲೆ ಆರಂಭವಾಯಿತು. ಗ್ರಾಮಸ್ಥರೆಲ್ಲರೂ ಶೀಲಯಾಜಿಯನ್ನು ಕೊಂಡಾಡಿದರು. ಯಾರಾದರೂ ತನ್ನನ್ನು ಹೊಗಳಿದಾಗ ಅವರನ್ನು ಸೂಕ್ಷ್ಮವಾಗಿ ಪರೀಕ್ಷಿಸುತ್ತಿದ್ದ ಶೀಲಯಾಜಿ. ಆದರೆ ಯಾರಮೇಲೂ ಅನುಮಾನ ಬರಲಿಲ್ಲ. ಒಂದುವೇಳೆ ಆ ದೇವನೇ ಈ ರೀತಿ ತನಗೆ ಹಣ ಒದಗಿಸುತ್ತಿರುವನೇನೋ ಎಂಬ ಸಂದೇಹವುಂಟಾಯಿತು. ಆಲೋಚಿಸಿದಷ್ಟೂ ಇದೇ ನಿಜವೆನಿಸಿತು.



ಶ್ರೀರಾಮನು ಯಾವ ರೂಪದಲ್ಲಿ ಬಂದು ತನಗೆ ಹಣ ಒದಗಿಸುತ್ತಿರುವನೋ ನೋಡಬೇಕೆನಿಸಿತು. ಯಾವ ರೂಪದಲ್ಲಾದರೂ ಆ ದೇವದೇವನನ್ನು ಕಣ್ಣಾರೆ ಕಾಣುವ ಉತ್ಕಟೇಚ್ಛೆಯುಂಟಾಯಿತು. ಅದರಿಂದ ಆತನು ಪ್ರತಿನಿತ್ಯ ತನ್ನ ಮನೆಯ ಕಿಟಕಿಯಬಳಿ ಕುಳಿತು ಸುತ್ತ ಮುತ್ತ ದೇವಸ್ಥಾನದಕಡೆ ನೋಡುತ್ತಿದ್ದನು.

ಒಂದು ತಿಂಗಳು ಕಳೆಯಿತು. ಯಾವ ವಿಚಿತ್ರವೂ ನಡೆಯಲಿಲ್ಲ. ತಾನು ಈ ರೀತಿ ಕಾದು ಕುಳಿತಿರಲು ಭಗವಂತನು ಬಾರನೇನೋ ಎಂಬ ಸಂಶಯವುಂಟಾಯಿತು. ಅಂತೆಯೇ ಆಶಾಭಂಗವೂ ಆಯಿತು. ಆದರೆ ಒಂದು ರಾತ್ರಿ ಆತನೆದುರುನೋಡುತ್ತಿದ್ದ ದೃಶ್ಯ ಕಾಣಿಸಿತು. ಕತ್ತಲೆಯಲ್ಲಿ ಯಾರೋ ಮುಸುಕು ಹಾಕಿಕೊಂಡು ಸತ್ರದತ್ತ ಹೋಗುತ್ತಿದ್ದರು. ಆ ವ್ಯಕ್ತಿಯ ಕೈಯಲ್ಲಿ ಒಂದು ಗಂಟು ಇತ್ತು. ಆತನು ಹುಂಡಿಯ ಹತ್ತಿರಕ್ಕೆ ಹೋಗಿ. ಅತ್ತಿತ್ತ ಒಂದುಸಾರಿ ದೃಷ್ಟಿಬೀರಿ, ಆ ಗಂಟನ್ನು ಹುಂಡಿಯಲ್ಲಿ ಹಾಕಿ, ಸರಸರನೆ ಹೊರಗೆ ನಡೆದನು.

ಶೀಲಯಾಜಿಗೆ ಆ ವ್ಯಕ್ತಿಯ ಗುರುತು ಸಿಕ್ಕಿತು. ಅವನು ಊರಾಚೆಯಿದ್ದ ಕೇರಿಯ ಕಳ್ಳರಾಮು. ಶೀಲಯಾಜಿಯ ಹೃದಯ ಡವಡವ ಬಡಿದುಕೊಳ್ಳಲಾರಂಭಿಸಿತು. ಅವನು ಕೂಡಲೇ ಹೊರಗೆ ಬಂದು ರಾಮನನ್ನು ಹಿಂಬಾಲಿಸಿದನು. ಊರಾಚೆಯಿದ್ದ ಕೇರಿಯಬಳಿಗೆ ಬಂದಾಗ, "ಲೋ ರಾಮು, ನಿಲ್ಲು" ಎಂದು ಕೂಗಿ ಕರೆದ ಶೀಲಯಾಜಿ.



ರಾಮನು ತಟಕ್ಕನೆ ನಿಂತು "ತಾವೇ, ನಮಸ್ಕಾರ ಸ್ವಾಮಿ" ಎಂದ ಚಕಿತನಾಗಿ.

"ನೀನು ಹುಂಡಿಯಲ್ಲಿ ಹಣದ ಗಂಟು ಹಾಕಿದುದನ್ನು ಕಂಡೆ. ಎಲ್ಲಿಂದ ಬಂತು ನಿನಗೆ ಆ ಹಣ" ಎಂದು ಕೆದಕಿ ಕೇಳಿದ ಶೀಲಯಾಜಿ.

ತನಗೇನೂ ತಿಳಿಯದೆಂದು ದಬಾಯಿಸಿದ ರಾಮು. ಕಡೆಗೆ ಅದು ಕಳ್ಳತನಮಾಡಿದ ಸೊತ್ತೆಂದು ಹೇಳಿ, "ಸ್ವಾಮಿ, ಎರಡು ತಿಂಗಳ ಕೆಳಗೆ ರಾಮಶೆಟ್ಟರ ಮನೆಯಿಂದ ಹತ್ತು ಸಾವಿರ ಅಪಹರಿಸಿದೆ. ಅವರು ಲಕ್ಷ್ಮೀಪುತ್ರರು. ಯಥೇಷ್ಟವಾಗಿದೆ ಹಣ. ಖರ್ಚು ಕಡಮೆ. ಪರಮಲೋಭಿ ಆತ. ನಿಮ್ಮಂತಹ ಪುಣ್ಯಾತ್ಮರು ಸತ್ಕಾರ್ಯಗಳನ್ನು ಮಾಡಲು ಮುಂದೆ ಬಂದರೆ ಬೆಂಬಲ ನೀಡಿ ಸಹಾಯ ಮಾಡುವುದಿಲ್ಲ.



ಇಷ್ಟೊಂದು ಹಣ ನಾನೇನು ಮಾಡಲಿ? ಅಂತಲೇ ಆಗಷ್ಟು ಈಗಷ್ಟು ಹಣವನ್ನು ಹುಂಡಿಯಲ್ಲಿ ಹಾಕಿದೆ. ನನ್ನ ಸ್ವಂತ ಖರ್ಚಿಗಾಗಿ ಸ್ವಲ್ಪ ಉಳಿಸಿಕೊಂಡೆ. ದಯವಿಟ್ಟು ನನ್ನ ಹೆಸರನ್ನು ಹೊರಗೆಳೆಯಬೇಡಿ " ಎಂದು ಅಂಗಲಾಚಿದ.

" ಮಹಾಪಾತಕನೋ ನೀನು ರಾಮು. ಕಳ್ಳತನ ಮಾಡಿದ್ದೊಂದು ತಪ್ಪು. ಆ ಅನಿಷ್ಟ ಹಣವನ್ನು ಪವಿತ್ರವಾದ ಹುಂಡಿಯಲ್ಲಿ ಹಾಕಿದುದೊಂದು ತಪ್ಪು. ಆ ಹಣದಿಂದ ದೇವರಿಗೆ ತೊಡಿಗೆ ಮಾಡಿಸಿದೆ! ವೇದಪಾಠಶಾಲೆ ಕಟ್ಟಿಸಿದೆ!! ಎಂತಹ ಅಪಚಾರವಾಯಿತು. ಸತ್ತು ನರಕಕ್ಕೆ ಹೋಗುತ್ತೇನೆ. ಏನಾದರೂ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಮುಟ್ಟಬಾರದ ಹಣ " ಎಂದು ಶೀಲಯಾಜಿ ತೊಳಲಾಡಿದನು.

" ಹಾಗೆ ಮಾಡಬೇಡಿ ಸ್ವಾಮಿ. ನಡುವೆ ಹಣವೇನು ಮಾಡೀತು? ಪಾಪಮಾಡಿದವನು ನಾನು. ಹಣ ನನ್ನದಲ್ಲ. ರಾಮುಶೆಟ್ಟಿದು." ಎಂದ ರಾಮು.

" ರಾಮುಶೆಟ್ಟಿರ ಹತ್ತಿರ ಅಷ್ಟೊಂದು ಹಣ ಇದೆಯೇ? ಹತ್ತು ಸಾವಿರ ವರಹ ಕಳೆದು ಹೋದರೂ ಕಿಮಕ್ ಕಮಕ್ ಎನ್ನದೆ ಚೇಳು ಕುಟ್ಟಿದ ಕಳ್ಳನಂತೆ ಸುಮ್ಮನಿದ್ದಾನಲ್ಲಾ " ಎಂದು ವಿಸ್ಮಿತನಾದ ಶೀಲಯಾಜಿ.

" ಲಕ್ಷಾಂತರವಿದೆ ಸ್ವಾಮಿ. ಹತ್ತು ಸಾವಿರ ಹೋಯಿತೆಂದು ಸುದ್ದಿ ಹರಡಿದರೆ ಹಣದ ವಿಷಯವೆಲ್ಲಾ ಬಯಲಿಗೆ ಬರುತ್ತಿದೆ. ಕಳ್ಳರಾದರೂ ಅಪಹರಿಸುತ್ತಾರೆ ಇಲ್ಲ ಸರಕಾರವಾದರೂ ಮುಟ್ಟಿಗೋಳು ಹಾಕುತ್ತದೆ. ಅಂತಲೇ



ಬಾಯಿ ಮುಚ್ಚಿಕೊಂಡು ಸುಮ್ಮನಿದ್ದಾನೆ ಶೆಟ್ಟಿ" ಎಂದ ರಾಮು.

"ರಾಮು, ಶೆಟ್ಟಿಯೊಂದಿಗೆ ಎಲ್ಲಾ ಹೇಳಿಬಿಡುತ್ತೇನೆ. ಈ ಹಾಳು ಹಣದ ದೆಶೆಯಿಂದ ನಾನು ನರಕಕ್ಕೆ ಹೋಗಲಾರೆ" ಎಂದು ತಲೆ ಚಚ್ಚಿಕೊಂಡ ಶೀಲಯಾಜಿ.

"ಸ್ವಾಮಿ, ಹುಂಡಿಯಲ್ಲಿ ಇಂದು ಎರಡು ಸಾವಿರ ಹಾಕಿದ್ದೇನೆ. ಅದರಿಂದ ವೈದ್ಯಶಾಲೆಯನ್ನು ಕಟ್ಟಿಸಿ. ರಾಮಶೆಟ್ಟರಿಗೆ ಇಲ್ಲದ ಚಿಂತೆ ನಿಮಗೇಕೆ? ದೇವರಿಗೆ ಚಿನ್ನದ ತೊಡಿಗೆ ಧರಿಸಿದಾಗ ಬಹಳ ದಿವ್ಯವಾಗಿ ಕಾಣಿಸುವರಂತೆ. ಪಾಪಿ ನಾನು. ನೋಡುವ ಯೋಗ್ಯತೆಯಿಲ್ಲ ನನಗೆ" ಎಂದ ರಾಮು. "ಏನು ಮಾಡಲೋ! ನನ್ನ ಬುದ್ಧಿ ಕೆಟ್ಟುಹೋಗಿದೆ. ನನಗೇನೂ ತೋರದಾಗಿದೆ. ಮುಂದೇನು ಮಾಡಬೇಕೋ ಆಲೋಚಿಸಬೇಕು. ನೀನು ನಡೆ" ಎಂದು ಹೇಳಿ ಶೀಲಯಾಜಿ ಹಿಂತಿರುಗಿದನು.

ಬೆಳಗಾದಕೂಡಲೇ ಗುಡಿಗೆ ಹೋಗಿ "ಅರ್ಚಕರೇ, ಆ ತೊಡಿಗೆ ತೆಗೆದುಬಿಡಿ" ಎಂದು ಶೀಲಯಾಜಿ ವಿಗ್ರಹದ ಕಡೆ ನೋಡುತ್ತಾ ನುಡಿದ.

"ಏಕೆ ಸ್ವಾಮಿ," ಆಶ್ಚರ್ಯಭರಿತನಾಗಿ ಕೇಳಿದ ಅರ್ಚಕ. ಅದಕ್ಕೆ ಉತ್ತರವಾಗಿ "ಮತ್ತೇನೂ ಇಲ್ಲ. ಕಳ್ಳಕಾಕರು ಎತ್ತಿಕೊಂಡು ಹೋಗುವರೇನೋ ಎಂಬ ಭಯ. ಮುಂಜಾಗ್ರತೆ ವಹಿಸುವುದು ಉತ್ತಮವಷ್ಟೆ. ನಾನು ಅವುಗಳನ್ನು ಜೋಪಾನವಾಗಿಡುತ್ತೇನೆ" ಎಂದ ಶೀಲಯಾಜಿ. ಅದನ್ನು ಕೇಳಿ ಪೂಜಾರಿ ನಕ್ಕು "ನಮ್ಮ ಊರಿನಲ್ಲಿ ಕಳ್ಳತನ ಎಲ್ಲಿ ಬಂತು





ಸ್ವಾಮಿ. ಅದೂ ದೇವರ ಒಡವೆ ಕದ್ದರೆ ಅವನು ಬದುಕುವುದುಂಟೇ? ಅಲ್ಲ, ಅನಿರೀಕ್ಷಿತವಾಗಿ ನಿಮಗೆ ಈ ಅನುಮಾನ ಏಕುಂಟಾಯಿತು?" ಎಂದ ಪೂಜಾರಿ.

ಶೀಲಯಾಜಿಗೆ ಏನು ಮಾಡಲೂ ತೋಚ ದಾಯಿತು. ಹುಂಡಿಯಲ್ಲಿ ಅಸ್ಪೃಶ್ಯನು ಹಾಕಿದ ಹಣವಿದೆ. ಅದರಿಂದ ಏನು ಮಾಡಬೇಕೋ ತಿಳಿಯಲಿಲ್ಲ. "ನಾನು ಮಹಾಪಾತಕಿ. ಅಂತಲೇ ಆ ರಾಮಚಂದ್ರಮೂರ್ತಿ ನನ್ನನ್ನು ಈ ಪರೀಕ್ಷೆಗೆ ಗುರಿಪಡಿಸಿದ್ದಾನೆ" ಎಂದುಕೊಂಡ. ಆಲಯ ಮೈಲಿಗೆಯಾಯಿತು; ಸತ್ರ ಮೈಲಿಗೆ ಆಯಿತು. ವೇದ ಘೋಷ ಕೇಳಿದಾಗಲೆಲ್ಲಾ ಶೀಲಯಾಜಿಗೆ ಮೈ ಕಂಪಿಸುವುದು. ಹುಂಡಿಯಲ್ಲಿದ್ದ ಹಣದಿಂದ ವೈದ್ಯಶಾಲೆ ಪ್ರಾರಂಭಿಸಬಹುದಿತ್ತು. ಆದರೆ ಶೀಲಯಾಜಿಯ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಹೀಗೇ ಅನೇಕ ವಾರಗಳು ಕಳೆದುವು. ತಿಂಗಳುಗಳು ಕಳೆದುವು. ಒಂದು ದಿನ ರಾಮ ಶೆಟ್ಟಿ ಪ್ರಮಾದವಸ್ಥೆಯಲ್ಲಿರುವನೆಂಬ ಸುದ್ದಿ ಅವನ ಕಿವಿಗೆ ಬಿತ್ತು. ಶೆಟ್ಟಿ ಒಂದುವೇಳೆ ತೀರಿ ಕೊಂಡರೆ ಆತನೊಂದಿಗೆ ಅಸ್ಪೃಶ್ಯ ರಾಮನು ಮಾಡಿದ ಕಳ್ಳತನ ಹೇಳುವ ಹಾಗಿಲ್ಲ. ಅಂತಲೇ ಶೀಲಯಾಜಿ ಶೆಟ್ಟಿಯ ಮನೆಕಡೆ ಓಡಿದ.

ಶೆಟ್ಟಿಯ ಸ್ಥಿತಿ ತುಂಬಾ ಕಳವಳವಾಗಿತ್ತು. ಶೀಲಯಾಜಿ ಅವನ ಹತ್ತಿರ ಹೋಗಿ "ಶೆಟ್ಟೀ, ಒಂದು ಅಚಾತುರ್ಯ ನಡೆದುಹೋಯಿತು. ಕೆಲವು ದಿನಗಳ ಹಿಂದೆ ನಿಮ್ಮ ಮನೆಯಲ್ಲಿ ಕಳ್ಳ ತನವಾಯಿತು. ಆ ಕಳ್ಳ ಹಾರಿಸಿದ ಹಣ ಸುಮಾರು ಹತ್ತು ಸಾವಿರ ವರಹಗಳೆಂದು ತಿಳಿ ಯಿತು. ಅದರಲ್ಲಿ ಅವನು ಒಂಬತ್ತು ಸಾವಿರ ವರಹಗಳನ್ನು ಗುಡಿ ಮತ್ತು ಸತ್ರಕ್ಕೆ ಕೊಟ್ಟನು. ಆ ಹಣವೆಲ್ಲಾ ಖರ್ಚಾದನಂತರವೇ ನನಗೆ ಈ ವಿಷಯ ತಿಳಿದುಬಂತು. ಅದನ್ನು ನಿಮಗೆ ಹಿಂತಿರುಗಿಸುವ ಶಕ್ತಿ ನನಗಿಲ್ಲ. ಆದ್ದರಿಂದ ಅದನ್ನು ತಾವು ದಾನವಾಗಿ ಕೊಟ್ಟಂತೆ ಭಾವಿ ಸಲು ಅನುಮತಿ ಕೊಡಿ" ಎಂದ.

ರಾಮಶೆಟ್ಟಿ ಜಿಪುಣಾಗ್ರೇಸರ ಚಕ್ರವರ್ತಿ. ಕೈ ಎತ್ತಿ ಒಂದು ಕಾಸು ದಾನಮಾಡುವ ಗೋಜಿಗೆ ಎಂದೂ ಹೋದವನಲ್ಲ. ಆದರೆ ಕೊನೆ ಗಳಿಗೆಯಲ್ಲಿ ಆತನಿಗೆ ಹಣದಮೇಲಿನ ಭ್ರಾಂತಿ, ಮಮಕಾರ ಮಾಯವಾಯಿತು. "ಅಯ್ಯಾ, ನಾನು ಲಕ್ಷ ವರಹಗಳನ್ನು ಭದ್ರಪಡಿಸಿರುವೆನು.



ನಾನೂ ತಿನ್ನಲಿಲ್ಲ; ಪರರಿಗೂ ಇಡಲಿಲ್ಲ. ನೀವು ಅಷ್ಟೊಂದು ಧರ್ಮಕಾರ್ಯಗಳೆಸುತ್ತಿದ್ದರೆ ನಾನು ಒಂದು ಕವಡೆಯನ್ನಾದರೂ ನಿಮಗೆ ಸಹಾಯ ಮಾಡಲಿಲ್ಲ. ಆ ಕಳ್ಳ ನನಗಿಂತಲೂ ಯೋಗ್ಯ. ಪುಣ್ಯವಂತ. ಹತ್ತು ಸಾವಿರ ಕಳವು ಮಾಡಿ, ಅದರಲ್ಲಿ ಒಂಬತ್ತೂ ಸಾವಿರ ವರಹಗಳನ್ನು ದಾನಮಾಡಿದ್ದಾನೆ" ಎಂದ ಶೆಟ್ಟಿ ಮೇಲು ಧ್ವನಿಯಲ್ಲಿ.

"ಅದೇನು ಶೆಟ್ಟೀ ಹಾಗೆ ಹೇಳುವಿರಿ. ಕಳ್ಳನು ಪುಣ್ಯವಂತ ಹೇಗಾದಾನು" ಎಂದ ಶೀಲಯಾಜಿ.

"ನಾನೂ ಒಬ್ಬ ಕಳ್ಳನೇ! ನಾನೊಬ್ಬ ವರ್ತಕನಬಳಿ ಗುಮಾಸ್ತನಾಗಿದ್ದೆ. ಒಂದುಸಾರಿ ಆತನು ವ್ಯಾಪಾರದಸಲುವಾಗಿ ಸಮುದ್ರದ ಮೇಲೆ ಹೋಗುವಾಗ ನನ್ನನ್ನೂ ಜೊತೆಗೆ ಕರೆದುಕೊಂಡು ಹೋದ. ಒಂದು ದೇಶದಲ್ಲಿ ಆತನು ಅಕಸ್ಮಾತ್ ಕಾಯಿಲೆ ಬಿದ್ದನು. ಆತ ನಿನ್ನು ಬದುಕಲಾರನೆಂದು ಖಚಿತವಾದಕೂಡಲೇ ನಾನು ಆತನ ಹಣವನ್ನು ಅಪಹರಿಸಿ ಇಲ್ಲಿಗೆ ಬಂದೆ. ವ್ಯಾಪಾರಮಾಡಿ ಬಹಳ ಹಣವನ್ನು ಸಂಪಾದಿಸಿದೆ. ಲಾಭ ಬಂದರೂಸಹ ನಷ್ಟ ವಾಯಿತೆಂದು ಜನರೊಂದಿಗೆ ಹೇಳಿಕೊಳ್ಳುತ್ತಿದ್ದೆ. ಸಮುದ್ರದಲ್ಲಿ ಯಾವುದಾದರೂ ಹಡಗು ಮುಳುಗಿತೆಂದರೆ ಅದರಲ್ಲಿ ನನ್ನ ಸರಕುಗಳಿ ತ್ತೆಂದು ಹೇಳಿ ಗೋಳಾಡುತ್ತಿದ್ದೆ. ನಾನೊಬ್ಬ ಲಕ್ಷಾಧಿಕಾರಿ ಎಂದು ಬಹಳ ಜನಕ್ಕೆ ಗೊತ್ತಿಲ್ಲ. ಪ್ರಾಯಶಃ ಆ ಕಳ್ಳನೊಬ್ಬನಿಗೆ ಗೊತ್ತಿರಬಹುದು. ಆ ಕಳ್ಳನಂತೆ ನಾನೂಸಹ ಕಳವುಮಾಡಿದ



ಮೂವತ್ತು ಸಾವಿರ ವರಹಗಳನ್ನು ನಿಮ್ಮ ಕೈಯಲ್ಲಿ ಕೊಡುತ್ತೇನೆ. ಪುಣ್ಯಕಾರ್ಯಗಳಿಗೆ ಅದನ್ನು ವಿನಿಯೋಗಿಸಿ" ಎಂದು ಶೆಟ್ಟಿ ಹಣದ ಚೀಲವನ್ನು ತರಿಸಿ ಶೀಲಯಾಜಿಗೊಪ್ಪಿಸಿದನು.

ಶೀಲಯಾಜಿ ಹರ್ಷಚಿತ್ತನಾದನು. ಅವನು ಮನೆಗೆ ಹಣದೊಂದಿಗೆ ಹಿಂತಿರುಗಿದನು. ಆದರೆ ಅಸ್ಪೃಶ್ಯ ರಾಮನನ್ನು ಕುರಿತುಮಾತ್ರ ಆತನ ಮನಸ್ಸಿಗೆ ನೆಮ್ಮದಿ ಇರಲಿಲ್ಲ. ಇದ್ದಕ್ಕಿದ್ದಂತೆ ಆತನಿಗೊಂದು ಯೋಚನೆ ಹೊಳೆಯಿತು. ಕೂಡಲೇ ಅಸ್ಪೃಶ್ಯ ರಾಮನನ್ನು ಕರೆಯ ಕಳು ಹಿಸಿದನು. ರಾಮನು ಬಂದು ಅಷ್ಟು ದೂರ ದಲ್ಲಿ ಕೈಕಟ್ಟಿಕೊಂಡು ನಿಂತನು.

"ಲೋ ರಾಮ, ನಿನ್ನದೊಂದು ಪಾಪ ಪರಿ ಹಾರವಾಯಿತು. ತನ್ನ ಬಳಿಯಿದ್ದ ಹಣವನ್ನು

ಕಳ್ಳತನ ಮಾಡಿದವನನ್ನು ಶೆಟ್ಟಿ ಕ್ಷಮಿಸಿಬಿಟ್ಟನು. ಆದರೆ ನಿನ್ನ ಎರಡನೇ ಪಾಪಕ್ಕೆ ನೀನು ನರಕಕ್ಕೆ ಹೋಗುವುದಂತೂ ಖಂಡಿತ. ಆದರೆ ನಿನ್ನ ಪಾಪದಲ್ಲಿ ನಾನು ಪಾಲುಗಾರನಾಗಲಾರೆ. ಇದೋ ನಿನ್ನ ಒಂಬತ್ತು ಸಾವಿರ ವರಹಗಳು. ತೆಗೆದುಕೊಂಡು ಹೋಗು" ಎಂದು ಒಂದು ಹಣದ ಥೈಲಿಯನ್ನು ಅವನ ಮುಂದೆ ಹಿಡಿದ.

"ಸ್ವಾಮಿ, ಈ ಹಣದಿಂದ ನಾನು ಯಾವ ಪುಣ್ಯಕಾರ್ಯ ಮಾಡಬಲ್ಲೆ. ನಿಮ್ಮ ಕೈಯಿಂದಲೇ ಇದನ್ನು ಧರ್ಮಕಾರ್ಯಗಳಿಗಾಗಿ ವೆಚ್ಚಮಾಡಿ" ಎಂದು ವಿನೀತವಾಗಿ ಕೇಳಿಕೊಂಡ ರಾಮ.

"ಅದಾಗದ ಕೆಲಸ. ಕೂಡಲೇ ನಿನ್ನ ಹಣ ತೆಗೆದುಕೊಂಡು ನಡೆ. ಇಲ್ಲ, ನಿನ್ನ ವಿಷಯ ಎಲ್ಲರ ಮುಂದೆ ಹೇಳಿಬಿಡುತ್ತೇನೆ" ಎಂದು ಕೂಗಾಡಿದ ಶೀಲಯಾಜಿ. ರಾಮ ಹಣವನ್ನು ಸ್ವೀಕರಿಸಿ ತಲೆ ತಗ್ಗಿಸಿಕೊಂಡು ಮನೆಗೆ ಹಿಂತಿರುಗಿದ.

ಬೇತಾಳ ಕಥೆ ಮುಗಿಸಿ "ರಾಜ, ನನಗೊಂದು ಸಂದೇಹವುಂಟಾಗಿದೆ. ಶೀಲಯಾಜಿ, ಅಸ್ಪೃಶ್ಯ ರಾಮ, ರಾಮಶೆಟ್ಟಿ ಈ ಮೂವರಲ್ಲಿ ಯಾರು ಹೆಚ್ಚು ಪುಣ್ಯಾತ್ಮರು. ಇದಕ್ಕೆ ಸಮಾಧಾನ ತಿಳಿದಿದ್ದೂಸಹ ಹೇಳದೆಯಿದ್ದರೆ ನಿನ್ನ ತಲೆ ಚೂರು ಚೂರು ಆಗುತ್ತದೆ" ಎಂದಿತು.

"ಶೀಲಯಾಜಿ ಪುಣ್ಯಕಾರ್ಯಗಳನ್ನು ಮಾಡಿದನಾದರೂ ಅವನಿಗೆ ಪಾಪಭಯ, ಅದರ ಚಿಂತೆ ಹೆಚ್ಚಿತ್ತು. ಅಸ್ಪೃಶ್ಯ ರಾಮ ಪಾಪ ಕಾರ್ಯ ಮಾಡಿದನಾದರೂ ಅವನಿಗೆ ಪುಣ್ಯದ ಮೇಲೆ ಆಸಕ್ತಿ ಹೆಚ್ಚು. ತಾನು ಅಡಿಯಿಡಲಾಗದ ಆಲಯದ ಅಭಿವೃದ್ಧಿಗೆ, ತಾನು ಕೇಳಲು ಅಧಿಕಾರವಿಲ್ಲದ ವೇದಪಠನಕ್ಕೆ ಅವನು ಸಹಾಯ ಮಾಡಿದ. ಅವನು ಪುಣ್ಯಾತ್ಮನೆಂದು ಗ್ರಹಿಸಿದಾತ ಶೆಟ್ಟಿ. ಆದ್ದರಿಂದ ಶೆಟ್ಟಿ ಶೀಲಯಾಜಿಗಿಂತಲೂ ಹೆಚ್ಚು ಪುಣ್ಯವಂತನು. ಆದರೆ ಅಸ್ಪೃಶ್ಯ ರಾಮನನ್ನು ನೋಡಿ ಕಲಿತನಾದುದರಿಂದ ಶೆಟ್ಟಿ ರಾಮನಿಗಿಂತ ಪುಣ್ಯಾತ್ಮನಲ್ಲ" ಎಂದು ಹೇಳಿದ ತ್ರಿವಿಕ್ರಮ.

ರಾಜನು ಮಾತು ಮುಗಿಸಿದ ಕೂಡಲೇ ಬೇತಾಳ ಯಥಾಪ್ರಕಾರ ಶವದೊಂದಿಗೆ ಮಾಯವಾಗಿ ಮರವೇರಿತು.





# ಮಿತ್ರಭೇದ

ದಮನಕನು ಹೀಗೆಂದು
ಮಿತ್ರ ಕರಟಕನಿಂಗೆ
ಬುದ್ಧಿ ನೀತಿಯಕಥೆಯ
ನಿಂತೊರೆದನು:
" ಜನರಿಲ್ಲ ದೊಂದೆಡೆಯ
ಮಠವೊಂದರಲ್ಲಿ
ಏಕಾಂಗಿ ದೇವಶ
ರ್ಮನು ವಾಸವಿದ್ದ.
ಅವರಿವರು ಕೊಟ್ಟಂತ
ಚಿಂದಿಬಟ್ಟೆಯ ಮಾರಿ
ಹಣಮಾಡಿ ತನ್ನ ಕಂ
ಕುಳಲಿಟ್ಟುಕೊಂಡು,
ಯಾರನೂ ನಂಬದೇ
ಇದ್ದ ನಾತನ ನೋಡಿ
ಹೇಗಾದರವನ ಗಂ
ಟಪಹರಿಸಬೇಕೆಂದು,
ನಟನೆಯಲಿ ನುರಿತೋರ್ವ
ಆಷಾಢಭೂತಿಯವ
ದೇವಶರ್ಮನ ಮುಂದೆ
ಬಂದೆರಗಿ ಸಾಷ್ಟಾಂಗ,
'ರಕ್ಷಿಸಿರಿ ಶರಣು! ಈ
ಸಂಸಾರದಿಂ ದೆನ್ನ
ಮೋಕ್ಷ ನೀವೇ ತೋರ
ಬೇಕು ಗುರುವೇ' ಎನುತ
ಪ್ರಾರ್ಥಿಸಲು ಆತನಾ
ಶರಣಾಗತಿಗೆ ಮೆಚ್ಚಿ
ತಲೆದೂಗಿ ದೇವಶ
ರ್ಮನು ಭೇಷು ಭೇಷೆಂದು
'ನಿನ್ನನ್ನು ಎನ್ನ ಶಿ
ಷ್ಯನ ಮಾಡಿಕೊಂಬೆನೋ.
ಘನಮಂತ್ರ ದುಪದೇಶ
ನಾ ನಿನಗೆ ಕೊಡುವೆನೋ.
ಮೋಕ್ಷಮಾರ್ಗದ ದೀಪ
ನಾ ಬೆಳಗಿಸಿಡೆವೆನೋ.
ಬಾರೆಂದವಗೆ ಮಂತ್ರ
ದುಪದೇಶ ಮಾಡಿದನು.

ಟಿ. ಎ. ಶರ್ಮ



ಅವನ ವಾಸಕೆ ತನ್ನ
ಮಠದ ಪಕ್ಕದಲೊಂದು
ಗುಡಿಸಲನು ಕೊಟ್ಟು ಮಠ
ದೊಳಗವನ ಬಿಡದೆಯೇ,
ಕೆಲಸ ಮಾಡಿಸುತಿರಲು,
ಅವನ ಹಣ ಗಂಟನ್ನು
ಅಪಹರಿಪ ಸಂಧಿಯನು
ಕಾಯುತಿದ್ದನು ಠಕ್ಕ.
ಒಂದು ದಿನ ದೂರದಿಂ
ಶಿಷ್ಯನೊಬ್ಬನು ಬಂದು
ದೇವಶರ್ಮನ ಕರೆದ
ನಾತಿಥ್ಯ ಕೊಡಲೆಂದು
ಆಷಾಢಭೂತಿಯೊಡ
ಗೂಡಿ ಹೊರಟನು ಶರ್ಮ

ದಾರಿಯಲ್ಲೊಂದು ಕಡೆ
ಹೊಳೆಯ ಬದಿ ನಡೆಯುತಿರೆ,
ಗುರು ಹಣದ ಸಂಚಿಯನು
ಬಟ್ಟೆ ಗಂಟಲಿ ತುರುಕಿ
ಶಿಷ್ಯನ ಬಳಿಯಲಿಟ್ಟು
'ಬಂದೆ ನೋಡುತಿರೆಂ'ಎಂದು
ಪೋದನಾ ಗುರು ದೇಹ
ಶಂಕೆಯನು ತೀರಿಸಲು.
ಪ್ರಾಮಾಣಿಕನಹಾಗೆ
ಕುಳಿತಿದ್ದ ನಾ ಶಿಷ್ಯ.
ಗುರು ಹೊಂಡದಲಿ ಕುಂತು
ಕಂಗೆ ಮರೆಯಾದಾಗ
ಠಕ್ಕ ಗಡಿಬಿಡಿಯಿಂದ
ಬಟ್ಟೆಗಂಟನು ಬಿಚ್ಚಿ
ಒಳಗಿದ್ದ ಹಣದ ಸಂ
ಚಿಯನೆತ್ತಿ, ಬಿರಬಿರನೆ
ಓಡಿಹೋದನು ಜಿಂಕೆ
ಯೋಲ್ ಮಾಯವಾಗಿಯೇ!
ಅಲ್ಲೆರಡು ಹೋತಗಳು
ತಮ್ಮ ತಮ್ಮೊಳಗೆಯೇ
ಹಾಯ್ದಾಡಿಕೊಳ್ಳುವಾ
ಚೆಂದವನು ನೋಡುತ್ತ
ದೇವಶರ್ಮನು ತನ್ನ
ತಾಮರೆತು ನಿಂತಿದ್ದ!
ಹೋತಂಗಳೆರಡು ಢೀ
ಢೀ ಹಾಯುತಿರುವಾಗ

ತಲೆಗಳಿಂದಿಳಿದ ನೆ
ತ್ತರು ನೆಲವ ನೆನೆಸಿತ್ತು.
ಆಗೊಂದು ಮಂದಮತಿ
ನರಿಯಣ್ಣ ಬಂದಲ್ಲಿ
ಹೋತಗಳ ನಡು ನುಗ್ಗಿ
ನೆತ್ತರನು ನೆಕ್ಕುತಿರೆ,
ಅಯ್ಯೋ, ನರಿ ಸಾಯ್ವುದೆಂ
ದಾ ಶರ್ಮ ತಪಿಸಿದನು!
ಅಷ್ಟರಲ್ಲೇ ಹೋತ
ಗಳ ಥೀಗೆ ಸಿಕ್ಕಿ ನರಿ
ಚಕ್ಕ ನಪ್ಪಚಿಯಾಗಿ
ಸತ್ತುಹೋದಾಗಿತ್ತು!
ಮತ್ತೆ ಗುರು ಗಡಿಬಿಡಿಯ
ನಡಿಗೆಯಿಂ ಮರಳಿದನು.
ಬಟ್ಟೆ ಗಂಟನು ಮಾತ್ರ
ಕಂಡಲ್ಲಿ ಪೆಚ್ಚಾದ!
'ಅಯ್ಯೋ! ಕೊಂದನು! ಕ್ರೂರ!
ಹಣವೆಲ್ಲ ಹೋಯ್ತುಲಾ!
ಎಂದಳುತ ಕೋಪದಿಂ
ಬಟ್ಟೆ ಗಂಟಿಗೆ ಬಡೆದ!
ಅದರಿಂದೆ ಕರಟಕಾ!
ಮೋಸಹೋಗದೆ ನಾವು
ಹದನಗೆಟ್ಟುದ ನೆಂತೊ
ಸರಿಮಾಡ ಬೇಕಾಯ್ತು.
ಸಮಯ ಬೆದರಿಸಿದರೂ
ಧೈರ್ಯವನು ಬಿಡದೀಗ



ಪಿಂಗಳಕ ಸಂಜೀವ
ಕರ ಗಾಢ ಸ್ನೇಹವನು
ಭಂಗಿಸಲುಬೇಕು! ಪಿಂ
ಗನ ಮೊನೆಯ ಉಗುರಿಂದೆ
ಸಂಜೀವಕನ ಕರುಳ
ಬಗಿಸುವೆನು ನೋಡುತಿರು!
ಧೀಮಂತನಿಂ ದಾಗ
ದೊಂದು ಕಾರ್ಯವು ಉಂಟೆ?
ನೀ ನೆನಗೆ ಸಹಕರಿಸು
ತಿರು ಸಾಕು ಕರಟಕಾ!
ಹಿಂದೊಬ್ಬ ಜೇಡತಾ
ವಿಷ್ಣುರೂಪವ ತಾಳಿ
ಅರಸುಕುವರಿಯ ವರಿಸಿ
ಕೊಳಲಿಲ್ಲ ವೇನಯ್ಯ?





# ವಿಚಿತ್ರ ಚಿಕಿತ್ಸೆ

ಒಂದು ನಗರದಾಚೆ ಪಾಳುಬಿದ್ದ ದೇವಾಲಯ ಒಂದಿತ್ತು. ಒಬ್ಬ ಬಡ ಬ್ರಾಹ್ಮಣನು ಆ ದೇವಾಲಯಕ್ಕೆ ಪೂಜಾರಿಯಾಗಿ ತನ್ನ ಹೊಟ್ಟೆ ಹೊರೆದುಕೊಳ್ಳೋಣವೆಂದು ಎಣಿಸಿದ್ದ. ಆದರೆ ಆ ದೇವಾಲಯಕ್ಕೆ ಎಲ್ಲೋ ಒಬ್ಬಿಬ್ಬರು ಬರುತ್ತಿದ್ದ ಕಾರಣ ದೇವರ ಜೊತೆಗೆ ಪೂಜಾರಿ ಸಹ ಉಪವಾಸವಿರಬೇಕಾಗಿತ್ತು. ಆದರೂ ದೇವರಲ್ಲಿ ನಂಬಿಕೆಯಿಟ್ಟು ದಿನಾ ಪೂಜೆ ಸಲ್ಲಿಸುತ್ತಿದ್ದನು. ಹೀಗಿರಲು ಒಂದು ಹುಣ್ಣಿಮೆಯ ದಿನ ಆತನಿಗೊಂದು ಕನಸಾಯಿತು. ಆ ಕನಸಿನಲ್ಲಿ ಈಶ್ವರನು ಕಾಣಿಸಿಕೊಂಡು "ಮಗೂ, ಈ ಪಟ್ಟಣದ ಅರಸನನ್ನು ಹೋಗಿ ನೋಡು. ನಿನ್ನ ಬಡತನ ನೀಗುವುದು" ಎಂದು ಹೇಳಿದ.

ಬ್ರಾಹ್ಮಣನು ಅದೇಪ್ರಕಾರವಾಗಿ ಅರಮನೆಗೆ ಹೋದನು. ಆದರೆ ದುರದೃಷ್ಟವಶಾತ್ ಆ ಸಮಯಕ್ಕೆ ರಾಜನು ಹಾಸಿಗೆ ಹಿಡಿದಿದ್ದನು. ರಾಜಭಟರು ವೈದ್ಯರನ್ನು ಹೊರತು ಮತ್ತೊಬ್ಬರನ್ನು ರಾಜನ ಸಂದರ್ಶನ ಮಾಡಲು ಅವಕಾಶ ಕೊಡುತ್ತಿರಲಿಲ್ಲ. 'ಇದನ್ನು ಅರಿತೂಸಹ ರಾಜನನ್ನು ಕಾಣುವಂತೆ ಈಶ್ವರನು ನನಗೆ ಅಪ್ಪಣೆ ಕೊಡಿಸುವುದರಲ್ಲಿ ಗೂಢಾರ್ಥ ವಿರಬೇಕು' ಎಂದು ಯೋಚಿಸಿ, ಬ್ರಾಹ್ಮಣನು ಭಟರೊಂದಿಗೆ "ಅಯ್ಯಾ, ನಾನೂ ಒಬ್ಬ ವೈದ್ಯ. ಒಳಗೆ ಹೋಗಲು ಅವಕಾಶ ಕೊಡಿ" ಎಂದು ಕೇಳಿಕೊಂಡ. ಅವರು ಆತನನ್ನು ಒಳಗೆ ಬಿಟ್ಟರು.

ಆದರೆ ರಾಜನಿದ್ದ ಕೋಣೆಗೆ ಹೋಗಲು ಮತ್ತೊಂದು ಪ್ರತಿಬಂಧವಿತ್ತು. ಪದೇ ಪದೇ ಅನೇಕ ವೈದ್ಯರು ಬಂದು ಹೋಗುತ್ತಿದ್ದುದನ್ನು ಕಂಡು ರಾಜನಿಗೆ ಬೇಸರವಾಗಿ ತನಗೆ ಚಿಕಿತ್ಸೆ ಮಾಡಲು ಬಂದು ರೋಗ ಗುಣಮಾಡದ ವೈದ್ಯರಿಗೆ ಜೀವಾವಧಿ ಶಿಕ್ಷೆ ವಿಧಿಸುವುದಾಗಿ ಪ್ರಕಟಿಸಿದ್ದನು. ಆದರೂ ಬ್ರಾಹ್ಮಣನು ಎದೆಗುಂದಲಿಲ್ಲ. ನೀರಿನಲ್ಲಿ ಮುಳುಗಿದವನಿಗೆ ಚಳಿ ಏನು ಬಂತು? ಜೀವಾವಧಿ ಶಿಕ್ಷೆಗೆ ಸಿದ್ಧನಾಗಿ, ಬ್ರಾಹ್ಮಣನು ರಾಜನಿಗೆ ಚಿಕಿತ್ಸೆ ಮಾಡಲು ಒಪ್ಪಿಕೊಂಡನು. ಆತನನ್ನು ರಾಜನಬಳಿಗೆ ಕರೆದೊಯ್ದರು. ಬ್ರಾಹ್ಮಣನು ರಾಜನಿಗೆದುರಾಗಿ ಕೈಕಟ್ಟಿಕೊಂಡು ನಿಂತು, ಕಾಯಿಲೆಯ ವಿವರವನ್ನು ಕೇಳಿ ತಿಳಿದು

ಕು. ಸುಮಿತ್ರಾ



ಕೊಂಡನು. ರಾಜನು ಹೇಳಿದುದನ್ನೆಲ್ಲಾ ಕೇಳಿದ ನಂತರ 'ಈ ರಾಜನಿಗೆ ರೋಗವೇನು ಇಲ್ಲ' ಎಂಬ ಭಾವನೆ ಬ್ರಾಹ್ಮಣನ ಮನಸ್ಸಿನಲ್ಲಿ ಮೂಡಿತು. ತಾನು ಯಾವುದೋ ಬೇನೆಯಿಂದ ನರಳುತ್ತಿರುವುದಾಗಿ ಭಾವಿಸಿ ರಾಜ ಹಾಸಿಗೆ ಹಿಡಿದಿದ್ದ. ಮಾಯಾರೋಗಕ್ಕೆ ಮದ್ದಿಲ್ಲವೆಂದು ಒಂದು ನಾಣ್ಣುಡಿಯಿದೆ. ಆದುದರಿಂದಲೇ ಯಾವ ವೈದ್ಯನಿಂದಲೂ ಆತನ ರೋಗವನ್ನು ಗುಣಪಡಿಸಲಾಗಲಿಲ್ಲ.



ರೋಗವನ್ನು ಕುರಿತು ತುಂಬಾ ಆಲೋಚಿಸುತ್ತಿದ್ದವನಂತೆ ಬ್ರಾಹ್ಮಣನು ನಟಿಸಿ, ರಾಜನ ಬೇನೆಯನ್ನು ಗುಣಪಡಿಸಲು ಒಂದು ಉಪಾಯ ಹುಡುಕಿದ. ಮೂರು ಬಾರಿ ತಲೆಯಾಡಿಸಿ "ಮಹಾಪ್ರಭು, ನಿಮ್ಮ ವ್ಯಾಧಿಗೆ ದಿವ್ಯವಾದ ಔಷಧವಿದೆ. ಅದನ್ನು ತಾವು ನಾನು ಹೇಳಿದ ಪ್ರಕಾರ ಮೂರು ಹೊತ್ತು ಸೇವಿಸಿದರೆ ವ್ಯಾಧಿ ಸಂಪೂರ್ಣವಾಗಿ ಗುಣವಾಗುವುದು" ಎಂದ ಬ್ರಾಹ್ಮಣ. "ಹೇಳಿ, ನೀವು ಹೇಳಿದ ಪ್ರಕಾರ ನಡೆದುಕೊಳ್ಳುವೆನು" ಎಂದ ರಾಜ.

"ನಾನೊಂದು ಕಷಾಯ ಕೊಡುವೆನು. ಅದನ್ನು ಮಹಾರಾಣಿಯವರೇ ಖುದ್ದಾಗಿ ನಿಮ್ಮ ಬಾಯಿಯಲ್ಲಿ ಸುರಿಯಬೇಕು. ಆದರೆ ನಿಮಗೆ ಕಷಾಯ ಕುಡಿಸುವಾಗ ರಾಣಿಯವರಾಗಲೀ, ಅದನ್ನು ಕುಡಿಯುವಾಗ ನೀವಾಗಲೀ, ಆನೆ ಮತ್ತು ಕುದುರೆಗಳ ವಿಷಯ ಆಲೋಚಿಸಬಾರದು. ಹಾಗೆ ಆಲೋಚಿಸಿದ್ದೇ ಆದರೆ ಈ ಔಷಧ ಕೆಲಸ ಮಾಡುವುದಿಲ್ಲ. ನಂತರ ನನ್ನನ್ನು ಆಕ್ಷೇಪಿಸಿ ಪ್ರಯೋಜನವಿಲ್ಲ" ಎಂದನಾ ವಿಪ್ರ. ರಾಜನು ನಸುನಕ್ಕು "ಇದೇನಂತಹ ಅಸಾಧ್ಯವಾದ ಕಾರ್ಯವಲ್ಲ. ಔಷಧ ಕುಡಿಯುವಾಗ ಆನೆ, ಕುದುರೆಗಳನ್ನು ಕುರಿತಾದರೂ ಯಾಕೆ ಯೋಚಿಸುವರು?" ಎಂದ.

ಮಾರನೇಯ ದಿನ ಬ್ರಾಹ್ಮಣ ಯಾವುದೋ ಕಷಾಯಮಾಡಿ ಕಳುಹಿಸಿದ. ಅದನ್ನು ರಾಜನ ಬಾಯಲ್ಲಿ ಸುರಿಯಲು ರಾಣಿ ಬಂದಳು. ಉದ್ಧರಣೆಯಿಂದ ಕಷಾಯವನ್ನು ರಾಜನ ಬಾಯಲ್ಲಿ ಸುರಿಯಲು ಸಿದ್ಧಳಾದಾಗ ಆಕೆಗೆ ಯಾವುದೋ ರಥ ಹೋಗುತ್ತಿರುವ ಸಪ್ಪಳ ಕೇಳಿಸಿತು. ಕೂಡಲೇ ಕುದುರೆ ಜ್ಞಾಪಕಕ್ಕೆ ಬಂತು. ರಾಜನ ಬಾಯಿಗೆ ಕಷಾಯ ಸುರಿಯದೆ "ಪ್ರಯೋಜನವಿಲ್ಲ. ನನಗೊಂದು ಕುದುರೆ ಜ್ಞಾಪಕಕ್ಕೆ

ಬಂತು." ಎಂದು ಔಷಧವನ್ನು ಕೆಳಗಿಟ್ಟಳು. ಎರಡನೇ ಹೊತ್ತು ರಾಣಿ ಕಷಾಯ ಸುರಿಯಲು ಬರಲು "ಇರು, ನನಗೆ ಆನೆಗಳ ವಿಷಯ ಜ್ಞಾಪಕಕ್ಕೆ ಬರುತ್ತಿದೆ" ಎಂದ ರಾಜ. ಅದು ಮೊದಲುಗೊಂಡು ರಾಜ, ರಾಣಿಯರಿಗೆ ಔಷಧದ ಹೆಸರು ಹೇಳಿದಾಕ್ಷಣ ಆನೆ, ಕುದುರೆಗಳು ಜ್ಞಾಪಕವಾಗುತಿತ್ತು.

ಹೀಗೆ ಒಂದು ತಿಂಗಳು ಕಳೆದನಂತರ ರಾಜನು ಬ್ರಾಹ್ಮಣನನ್ನು ಕುರಿತು "ಎಲೈ ಬ್ರಾಹ್ಮಣೋತ್ತಮನೇ, ನಿನ್ನ ಔಷಧ ಸೇವಿಸಬೇಕೆಂದಾಗಲೆಲ್ಲಾ ಆನೆ, ಕುದುರೆಗಳ ಹೊರತು ಮತ್ತೇನೂ ಜ್ಞಪ್ತಿಗೆ ಬರುವುದಿಲ್ಲ. ಏನು ಮಾಡಲಿ?" ಎಂದು ಕೇಳಿದ.

"ಮಹಾಪ್ರಭು, ಇದಕ್ಕೊಂದು ಉಪಾಯವಿದೆ. ನಿಮ್ಮಬಳಿ ಇರುವ ಆನೆ ಮತ್ತು ಕುದುರೆಗಳನ್ನು ಪಾತ್ರವರಿತು ಬ್ರಾಹ್ಮಣನೊಬ್ಬನಿಗೆ ದಾನಮಾಡಿ. ನಂತರ ಅವು ಜ್ಞಾಪಕಕ್ಕೆ ಬರುವುದಿಲ್ಲ. ನಿಮ್ಮ ಬೇನೆ ಗುಣವಾಗುವುದು" ಎಂದ ಬ್ರಾಹ್ಮಣ. "ಮತ್ತೆ ಬೇರೆಯವರೇಕೆ? ನೀವೇ ಸ್ವೀಕರಿಸಿ" ಎಂದ ರಾಜ.

ಅದೇಪ್ರಕಾರ ರಾಜನು ದಾನಮಾಡಲು ನಿರ್ಧರಿಸಿದನು. ಎಲ್ಲ ಏರ್ಪಾಟುಗಳನ್ನು ಮಾಡಲು ಅನೇಕ ಉದ್ಯೋಗಿಗಳನ್ನು ಕರೆಸಲಾಯಿತು. ಅರಮನೆಯ ಗಜಶಾಲೆ, ಅಶ್ವಶಾಲೆಗೆ ಸೇರಿದ್ದ ಆನೆ ಕುದುರೆಗಳನ್ನು ಲೆಕ್ಕ ಮಾಡಿದರು. ರಾಜನೂಸಹ ಎದ್ದು ಕುಳಿತು ಅವರೊಂದಿಗೆ ತಾನೂ ಲೆಕ್ಕಮಾಡುತ್ತಿದ್ದನು. ಆ ಕಾರ್ಯದಲ್ಲಿ ಮಗ್ನನಾಗಿದ್ದುದರಿಂದ ರಾಜನಿಗೆ ಬೇನೆಯ ವಿಷಯ ಜ್ಞಾಪಕಕ್ಕೆ ಬರಲಿಲ್ಲ.

"ಇನ್ನೂ ದಾನ ಪೂರ್ತಿಯಾಗುವ ಮೊದಲೇ ಮಹಾರಾಜರ ರೋಗ ವಾಸಿಯಾದಂತೆ ತೋರುತ್ತಿದೆ" ಎಂದು ಅಲ್ಲಿ ನೆರೆದಿದ್ದ ಜನ ಹೇಳುತ್ತಿದ್ದರು. ಬ್ರಾಹ್ಮಣನು ರಾಜನಿಂದ ದಾನ ಪಡೆದು "ನಿಮ್ಮ ಚಿಕಿತ್ಸೆ ಪೂರ್ತಿಯಾಯಿತು. ನನಗಪ್ಪಣೆ ಕೊಡಿ" ಎಂದು ಕೇಳಿದನು. ರಾಜನಿಗೂ ತನ್ನ ಕಾಯಿಲೆ ವಾಸಿಯಾದಂತೆ ತೋರಿತು. ಬ್ರಾಹ್ಮಣನಿಗೆ ಅನೇಕ ಬಹುಮಾನಗಳನ್ನು ಕೊಟ್ಟು ಕಳುಹಿಸಿದ ರಾಜ. ಬ್ರಾಹ್ಮಣನು ದೇವಾಲಯದ ದುರಸ್ತು ಮಾಡಿ, ದೇವರಿಗೆ ಪೂಜೆಸಲ್ಲಿಸುತ್ತಾ, ಸುಖವಾಗಿದ್ದ.






3

[ಟ್ರಾಯ್‌ನಗರದಲ್ಲಿ ವರ್ಷಂಪ್ರತಿ ನಡೆಯುವ ಉತ್ಸವಕ್ಕೆ ಮೋಹನ ಹೋದ. ವರ್ಧನನಿಗೆ ಮೋಹನ ತನ್ನ ಮಗನೆಂದು ತಿಳಿಯಿತು. ಕಾಮಿನೀದೇವಿಯ ಭಕ್ತ ಮೋಹನ ಸ್ಪಾರ್ಟಾಕ್ಕೆ ಹೋಗಿ, ಭುವನಸುಂದರಿಯ ಗಂಡ ಪ್ರತಾಪ ಇಲ್ಲದ ಸಮಯದಲ್ಲಿ ಅವಳನ್ನು ಎತ್ತಿಕೊಂಡು ಬಂದು ಮದುವೆಮಾಡಿಕೊಂಡ. ಗ್ರೀಕರು ಮಾಡಿದ ರಾಯಭಾರ ವಿಫಲವಾಯಿತು.]

**ಭು**ವನಸುಂದರಿಯನ್ನು ನಯವಾದ ರೀತಿಯಲ್ಲಿ ಹಿಂದಕ್ಕೆ ಕರೆತರುವ ಪ್ರಯತ್ನ ವಿಫಲವಾದ ಕೂಡಲೇ ಪ್ರತಾಪನು ಗ್ರೀಕ್ ರಾಜಕುಮಾರರೆಲ್ಲರಿಗೂ "ಭುವನಸುಂದರಿಯನ್ನು ವರಿಸುವ ಸಮಯದಲ್ಲಿ ನೀವೆಲ್ಲ ಮಾಡಿದ ವಾಗ್ದಾನದ ಪ್ರಕಾರ ಈಗ ನನಗೆ ಸಹಾಯಮಾಡಿ" ಎಂದು ಸುದ್ದಿ ಕಳುಹಿಸಿದನು.

ಈ ರೀತಿ ಸುದ್ದಿ ಕಳುಹಿಸಿದ್ದಷ್ಟೇ ಅಲ್ಲದೆ ಸ್ವತಃ ಗ್ರೀಕ್ ದೇಶದಲೆಲ್ಲಾ ಸಂಚರಿಸಿ, ಪ್ರತಿ ರಾಜ್ಯಕ್ಕೂ ಭೇಟಿಕೊಟ್ಟು, ಪ್ರತಿಯೊಬ್ಬ ರಾಜನನ್ನೂ ತನ್ನಪಕ್ಷ ವಹಿಸಿ ಯುದ್ಧ ಮಾಡಬೇಕೆಂದು ಕೋರಿದನು. ಇಥಾಕಾ ರಾಜನಾದ ರೂಪಧರನ ಬಳಿಗೆ ಪ್ರತಾಪನೂ, ಆತನ ಅಣ್ಣನಾದ ರಾರಾಜನೂ ಹೋದರು. ಆದರೆ ರೂಪಧರನು ಈ ಯುದ್ಧದಲ್ಲಿ ಭಾಗವಹಿಸಕೂಡದೆಂದು ಈ ಮೊದಲೇ ನಿರ್ಧರಿಸಿದ್ದನು. ಅದಕ್ಕೆ ಒಂದು ಕಾರಣವೂ ಇತ್ತು. ಆತನು ಟ್ರಾಯ್‌ನಗರಕ್ಕೆ ಹೋದಪಕ್ಷಕ್ಕೆ ಅಲ್ಲಿಂದ ಹಿಂತಿರುಗುವಾಗ ಆತನು ಅನೇಕಾನೇಕ ಕಷ್ಟನಷ್ಟಗಳಿಗೆ ಗುರಿಯಾಗಬೇಕಾಗುವುದೆಂದೂ,

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ





ಇಪ್ಪತ್ತೂ ವರ್ಷಗಳತನಕ ಸ್ವಸ್ಥಾನಕ್ಕೆ ಹಿಂತಿರುಗುವಂತಿಲ್ಲವೆಂದೂ ಅಶರೀರವಾಣಿ ನುಡಿದಿತ್ತು.

ಅದರಿಂದ ರೂಪಧರನು ಯುದ್ಧಕ್ಕೆ ಹೋಗದೆ ತಪ್ಪಿಸಿಕೊಳ್ಳಲು ಒಂದು ಉಪಾಯ ಹೂಡಿದ. ರೈತರು ಧರಿಸುವ ಕುಲಾವಿಯನ್ನು ತಲೆಯಮೇಲೆತ್ತಿಕೊಂಡು ನೊಗಕ್ಕೆ ಒಂದುಕಡೆ ಎತ್ತನ್ನೂ, ಮತ್ತೊಂದುಕಡೆ ಕತ್ತೆಯನ್ನೂ ಕಟ್ಟಿ ಉತ್ತ ಸಾಲುಗಳಲ್ಲಿ ಉಪ್ಪನ್ನು ಚೆಲ್ಲುತ್ತಾ ಹೊಲವನ್ನು ಉಳುತ್ತಿದ್ದನು. ಪಕ್ಕದಲ್ಲಿ ಆತನ ಹೆಂಡತಿ ಪದ್ಮಮುಖಿ ತನ್ನ ಎಳೆಗೂಸನ್ನು ಕಂಕುಳಲ್ಲಿ ಎತ್ತಿಕೊಂಡು ನಿಂತಿದ್ದಳು.

ರೂಪಧರನು ಹುಚ್ಚನಂತೆ ನಟಿಸುತ್ತಿದ್ದುದು ಮಾತ್ರವಲ್ಲದೆ ತನ್ನನ್ನು ನೋಡಲು ಬಂದ ಪ್ರತಾಪ, ರಾರಾಜರನ್ನೂ ನೋಡದವನಂತೆ ನಟಿಸಿದನು. ಆದರೆ ಅವರು ಈ ಆಟಕ್ಕೆ ಮರುಳಾಗಲಿಲ್ಲ. ಪದ್ಮಮುಖಿಯ ಕೈಯಲ್ಲಿದ್ದ ಹಾಲುಹಸುಳೆಯನ್ನು ಎಳೆದುಕೊಂಡು, ರೂಪಧರನ ನೇಗಿಲಿಗೆ ಅಡ್ಡವಾಗಿ ಮಲಗಿಸಿದರು.

ರೂಪಧರನು ತಟಕ್ಕನೆ ಹಗ್ಗವನ್ನು ಎಳೆದು ನೇಗಿಲನ್ನು ನಿಲ್ಲಿಸಿದ. ಇದರಿಂದ ಆತನಿಗೆ ಮತಿಭ್ರಮಣೆಯುಂಟಾಗಲಿಲ್ಲವೆಂಬುದು ಖಚಿತವಾಯಿತು. ಯುದ್ಧದಲ್ಲಿ ಅವನು ಪ್ರತಾಪನ ಪಕ್ಷವಹಿಸಿ ಸಹಾಯ ಮಾಡಲು ಒಪ್ಪಿಕೊಳ್ಳಲೇಬೇಕಾಯಿತು.

ಟ್ರಾಯ್‌ನಗರದಮೇಲಿನ ಯುದ್ಧದಲ್ಲಿ ಭಾಗವಹಿಸಿದವರಲ್ಲಿ ಉತ್ಸಾಹವಿಲ್ಲದೆ ಕಾಟಾಚಾರಕ್ಕೆ ಸೇರಿದವರೂಸಹ ಇದ್ದರು. ಒಬ್ಬ ರಾಜಕುಮಾರನು ಐವತ್ತು ಹಡಗುಗಳನ್ನು ಕಳುಹಿಸುವುದಾಗಿ ವಾಗ್ದಾನಮಾಡಿ, ಕೇವಲ ಒಂದೇ ಒಂದು ಹಡಗನ್ನು ಕಳುಹಿಸಿದ್ದನು. ಉಳಿದ ನಲವತ್ತೊಂಬತ್ತು ಹಡಗುಗಳು ಆ ಹಡಗಿನಲ್ಲೇ ಇದ್ದುವು. ಆದರೆ ಅವೆಲ್ಲ ಮಣ್ಣಿನಿಂದ ಮಾಡಿದ ಬೊಂಬೆ ಹಡಗುಗಳಾಗಿದ್ದುವು.

ವಜ್ರಕಾಯನೆಂಬ ಯುವಕನ ಸಹಾಯ ಸಹಕಾರಗಳಿಲ್ಲದೆ ಟ್ರಾಯ್‌ನಗರ ವಶವಾಗುವುದು ಅಸಂಭವವೆಂದು ಗ್ರೀಕ್ ಜೋಯಿಸರಿಂದ ತಿಳಿದುಬಂತು. ವಜ್ರಕಾಯನು ತಟನೀ ಎಂಬಾಕೆಯ ಏಳನೇಯ ಕುಮಾರ. ತನ್ನ ಮಗನು ಪ್ರಪಂಚದಲೆಲ್ಲಾ ಅಪ್ರತಿಮ ಸಾಹಸಿಯಾಗಬೇಕೆಂಬ ಉದ್ದೇಶದಿಂದ ತಟನಿ ಮಗನ ಹಿಮ್ಮಡಿ ಹಿಡಿದು ಸ್ಟಿಕ್ಸ್‌ನದಿಯಲ್ಲಿ ಅದ್ದಿದ್ದಳು. ಈ ಕಾರಣ

ದಿಂದ ಆತನ ಶರೀರವು ವಜ್ರಕಾಯವಾಯಿತು. ತಾಯಿ ಹಿಡಿದುಕೊಂಡಿದ್ದ ಹಿಮ್ಮಡಿಮಾತ್ರ ಬದಲಾಯಿಸದೆ ಇದ್ದಹಾಗೇ ಇತ್ತು.

ವಜ್ರಕಾಯನು ಬಾಲ್ಯದಲ್ಲೇ ಬೇಟೆಯಾಡುವದರಲ್ಲಿ, ಓಟದಲ್ಲಿ, ಧೈರ್ಯಸಾಹಸಗಳಲ್ಲಿ, ಸಂಗೀತ ನೃತ್ಯಗಳಲ್ಲಿ ಅಪ್ರತಿಮನೆನಿಸಿಕೊಂಡಿದ್ದನು. ಆತನು ಕೇವಲ ತನ್ನ ಆರನೇಯ ವಯಸ್ಸಿನಲ್ಲೇ ಕಾಡುಹಂದಿಯೊಂದನ್ನು ಕೊಂದನು. ಆತನು ಮೊಲ, ಜಿಂಕೆ ಮುಂತಾದುವುಗಳನ್ನು ಬೇಟೆಯಾಡುತ್ತಿದ್ದ ರೀತಿಯೇ ಬೇರೆ. ತಾನೂ ಅವುಗಳೊಂದಿಗೆ ಓಡಿ ಓಡಿಯೇ ಅವುಗಳನ್ನು ಹಿಡಿಯುತ್ತಿದ್ದನು.

ವಜ್ರಕಾಯನನ್ನು ಯುದ್ಧಕ್ಕೆ ಕರೆಯಲು ರೂಪಧರ, ಭೂದವ, ನವದ್ಯೋತರು ಹೊರಟರು. ಆದರೆ ತನ್ನ ಮಗನು ಟ್ರಾಯ್ ಯುದ್ಧಕ್ಕೆ ಹೋದರೆ ಜೀವದಿಂದ ಹಿಂತಿರುಗಲಾರನೆಂದು ವಜ್ರಕಾಯನ ತಾಯಿ ತಟನಿಗೆ ತಿಳಿದಿತ್ತು. ಆದುದರಿಂದ ಆಕೆ ಅವನಿಗೆ ಸ್ತ್ರೀವೇಷ ತೊಡಿಸಿ, ಒಬ್ಬಾನೊಬ್ಬ ರಾಜನ ಅಂತಃಪುರದಲ್ಲಿ ರಹಸ್ಯವಾಗಿ ಬಚ್ಚಿಟ್ಟಳು.

ವಜ್ರಕಾಯನಿಗಾಗಿ ಬಂದವರು ರಾಜಭವನದಲೆಲ್ಲಾ ಹುಡುಕಾಡಿದರು. ಅವರಿಗೆ ವಜ್ರಕಾಯನು ಸಿಕ್ಕಲಿಲ್ಲ. ರೂಪಧರನಿಗೆ ಇದ್ದಕ್ಕಿದ್ದಂತೆ ಒಂದು ಯೋಚನೆ ಹೊಳೆಯಿತು. ವಜ್ರಕಾಯನು ಸ್ತ್ರೀರೂಪದಲ್ಲಿ ಅಂತಃಪುರದಲ್ಲಿ ಎಲ್ಲಿಯಾದರೂ ಅಡಗಿರಬಹುದೆಂದು ಶಂಕೆಯುಂಟಾಯಿತು. ಅವನನ್ನು ಹೊರಗೆಳೆಯಲು ರೂಪ




ಧರನು ಒಂದು ಉಪಾಯ ಹೂಡಿದನು. ಅಂತಃಪುರ ಸ್ತ್ರೀಯರಿಗೆ ಅನೇಕಾನೇಕ ಉಡುಗೊರೆಗಳನ್ನು ತಂದನು. ಸ್ತ್ರೀಯರಿಗೆ ಮೆಚ್ಚುಗೆಯಾಗುವಂತಹ ಉಡುಗೆ ತೊಡಿಗೆಗಳು, ಆಭರಣಗಳು ಇತ್ಯಾದಿಗಳು ಅದರಲ್ಲಿ ಇದ್ದುವು. ಅದರೊಂದಿಗೆ ಭಲ್ಲೆ ಮತ್ತು ಗುರಾಣಿಗಳೂಸಹ ಇದ್ದುವು. ಅವುಗಳನ್ನೆಲ್ಲಾ ಒಂದುಕಡೆ ಪ್ರದರ್ಶಿಸಿ, ಅವರವರಿಗೆ ಪ್ರಿಯವಾದ ವಸ್ತುಗಳನ್ನು ಆರಿಸಿಕೊಳ್ಳಬಹುದೆಂದು ರೂಪಧರನು ಅಂತಃಪುರ ಸ್ತ್ರೀಯರಿಗೆ ಸುದ್ದಿ ಕಳುಹಿಸಿದನು.

ಸ್ತ್ರೀಯರು ಸಡಗರದಿಂದ ಬಂದು ತಮಗೆ ಬೇಕಾದ ವಸ್ತುಗಳನ್ನು ಆರಿಸಿಕೊಳ್ಳುತ್ತಿರಲು, ರೂಪಧರನ ಆಜ್ಞೆಯಂತೆ ರಾಜಭವನದ ಹೊರಗಡೆ ಭೇರಿಗಳು ಮೊಳಗಿದವು. ಆ



ಶಬ್ದ ಕೇಳಿದ ಕೂಡಲೇ ಸ್ತ್ರೀ ವೇಷಧಾರಿ ವಜ್ರಕಾಯನು ತನ್ನ ಸ್ತ್ರೀ ಉಡುಪುಗಳನ್ನು ಕಳಚಿ, ಈಟಿ ಮತ್ತು ಡಾಲನ್ನು ತೆಗೆದುಕೊಂಡನು. ಕೂಡಲೇ ರೂಪಧರ ಮೊದಲಾದವರು ಅವನ ಗುರುತು ಹಿಡಿದರು. ಅನಂತರ ವಜ್ರಕಾಯನು ಯುದ್ಧಕ್ಕೆ ಸೇರಲು ಸಮ್ಮತಿಸಿದನು.

ಗ್ರೀಕ್ ನಾವೆಗಳು ಔಲಿಸ್‌ಬಳಿ ಸಿದ್ಧವಾಗಿದ್ದುವು. ಆಗ ಕ್ರೀಟ್‌ನಿಂದ ದೂತರು ಒಂದು ವರ್ತಮಾನ ತಂದರು. ರಾರಾಜನಿಗೆ ಕೊಟ್ಟಂತೆ ತನಗೂ ಸಹ ಸೇನಾನಾಯಕತ್ವವನ್ನು ಕೊಟ್ಟಲ್ಲಿ ತಾನು ನೂರು ಹಡಗುಗಳೊಂದಿಗೆ ಬಂದು ಸೇರುವುದಾಗಿ ಕ್ರಿಟ್‌ದೇಶದ ಅರಸನಾದ ಪ್ರಭವನು ಸುದ್ದಿ ಕಳುಹಿಸಿದ್ದನು. ಭುವನಸುಂದರಿಯ ಸ್ವಯಂವರಕ್ಕೆ ಹೋಗಿದ್ದ ರಾಜಕುಮಾರರಲ್ಲಿ ಪ್ರಭವನೂ ಒಬ್ಬನು. ಅವನು ತುಂಬಾ ಚೆಲುವನೆಂದು ಪ್ರತೀತಿ. ಪ್ರಭವನ ಕೇಳಿಕೆಗೆ ಮನ್ನಣೆ ದೊರೆಯಿತು. ಅವನು ತನ್ನ ನೂರು ಹಡಗುಗಳೊಂದಿಗೆ ಬಂದನು.

ಯುದ್ಧಕ್ಕೆ ಹೊರಟ ಗ್ರೀಕ್ ಮಹಾಯೋಧರಲ್ಲಿ ಪ್ರತಿಯೊಬ್ಬರನ್ನು ಒಂದೊಂದು ನಿರ್ದಿಷ್ಟವಾದ ಕೆಲಸಕ್ಕೆ ನೇಮಿಸಲಾಗಿತ್ತು. ಸೈನಿಕ ಬಲಕ್ಕೆಲ್ಲಾ ಸರ್ವಸೇನಾನಿ ರಾರಾಜ. ಆತನ ಕೆಳಗೆ ರೂಪಧರ, ಪ್ರಭೋದ ಮತ್ತು ದೇವಮಯರು ಉಪಸೇನಾಧಿಪತಿಗಳಾಗಿದ್ದರು. ನೌಕಾಬಲಕ್ಕೆ ಸೇನಾಧಿಪತಿ ವಜ್ರಕಾಯ. ಅವನ ಕೆಳಗೆ ಉಪನಾಯಕರೆಂದರೆ ಭೂಧವ, ರಕ್ತವರ್ಣರು. ಪೀಲಸ್ ರಾಜನಾದ ನವದ್ಯೋತನು ಯೋಧರಲೆಲ್ಲಾ ವೃದ್ಧನೂ, ಯುದ್ಧತಂತ್ರ



ನಿಪುಣನೂ, ವಿವೇಕಿಯೂ ಹೌದು. ಮೂರು ತಲೆಮಾರುಗಳಿಂದ ಪ್ರಜೆಗಳನ್ನು ಪಾಲಿಸಿದ ಈ ಪಿತಾಮಹನು ವೃದ್ಧಾಪ್ಯದಲ್ಲೂ ಸಹ ರಣರಂಗ ದಲ್ಲಿ ಸಿಂಹನಾದ ಮಾಡಿದರೆ ಶತ್ರುಗಳು ತರತರ ನಡುಗುತ್ತಿದ್ದರು. ರಾರಾಜನು ಆತನ ಸಲಹೆ ಯನ್ನು ತೆಗೆದುಕೊಳ್ಳದೆ ಯಾವ ಕಾರ್ಯವನ್ನೂ ಮಾಡುತ್ತಿರಲಿಲ್ಲ. ಯುದ್ಧ ಸಂಬಂಧದ ವಿಷಯ ದಲ್ಲಿ ಯಾವ ಸಮಸ್ಯೆ ಬಂದರೂ ನವದ್ಯೋತ ಮತ್ತು ರೂಪಧರರ ಸಲಹೆಗೆ ವ್ಯತ್ಯಾಸವಿರುತ್ತಿರ ಲಿಲ್ಲ. ಅವರದು ಏಕಾಭಿಪ್ರಾಯವುಳ್ಳ ಸಲಹೆ ಯಾಗಿರುತಿತ್ತು.

ಅತಿರಥರೆಂದು ಪರಿಗಣಿಸಲ್ಪಟ್ಟವರಲ್ಲಿ ಭೂಧ ವನೂ ಒಬ್ಬ. ಧೈರ್ಯ, ಸಾಹಸ, ಶಕ್ತಿ ಮತ್ತು ಅಂದಗಳಲ್ಲಿ ವಜ್ರಕಾಯನನ್ನು ಬಿಟ್ಟರೆ ಭೂಧ ವನೇ ಮುಖ್ಯನು. ಅವನಿಗೆ ದೇವತೆಗಳೆಂದರೆ ಲಕ್ಷ್ಯವೇ ಇರಲಿಲ್ಲ. ಅವನು ಯುದ್ಧಕ್ಕೆ ಹೊರ ಡುವ ಸಮಯದಲ್ಲಿ ಹಿರಿಯರು "ಮಗು, ರಣ ರಂಗದಲ್ಲಿ ಪರಾಕ್ರಮವನ್ನು ತೋರಿ, ದೇವತೆ ಗಳ ಸಹಾಯದಿಂದ ವಿಜಯಲಕ್ಷ್ಮಿಯನ್ನು ವರಿಸು" ಎಂದು ಆಶೀರ್ವಾದ ಮಾಡಿದರು. ಆಗ ಅವನು "ದೇವತೆಗಳ ಸಹಾಯದಿಂದ ಅಂಜುಕುಳಿಗಳೂ ಸಹ ವಿಜಲಕ್ಷ್ಮಿಯನ್ನು ವರಿ ಸುವರು. ನಾನು ದೇವತೆಗಳ ಬೆಂಬಲವಿಲ್ಲ ದೆಯೇ ವಿಜಯಲಕ್ಷ್ಮಿಯನ್ನು ವರಿಸುವೆನು" ಎಂದು ಹೆಮ್ಮೆಯಿಂದ ಹೇಳಿಕೊಂಡನು.

ಉಪಭೂಧವನು ಭೂಧವನ ಬಂಧುವಲ್ಲ. ಈಟಿ ಎಸೆಯುವುದರಲ್ಲಿ ಉಪಭೂಧವನ ಸರಿ ಸಮಾನರು ಗ್ರೀಕ್ ಸೇನೆಯಲ್ಲಿ ಮತ್ತೊಬ್ಬರಿರ







ಲಿಲ್ಲ. ಓಟದಲ್ಲಿ ಅವನನ್ನು ಮೀರಿಸಬಲ್ಲವನೆಂದರೆ ಪ್ರಾಯಶಃ ವಜ್ರಕಾಯನೊಬ್ಬನೇ!

ದೇವಮಯನು ಭುವನಸುಂದರಿಯನ್ನು ಪ್ರೇಮಿಸಿದ್ದನು. ಮೋಹನನು ಆಕೆಯನ್ನು ಹಾರಿಸಿಕೊಂಡು ಹೋದುದು ದೇವಮಯನಿಗೆ ಪ್ರತ್ಯೇಕ ಆಗ್ರಹವನ್ನುಂಟುಮಾಡಿತು. ಅದರಿಂದ ಅವನು ಸೇಡುತೀರಿಸಿಕೊಳ್ಳಲು ಯುದ್ಧಕ್ಕೆ ಹೊರಟನು.

ಡಿಲೋಸ್ ರಾಜನಾದ ಮುಷ್ಕರನು ಸೈನ್ಯಕ್ಕೆ ಅಗತ್ಯವಾದ ಆಹಾರಪದಾರ್ಥಗಳನ್ನು ಒದಗಿಸಿದನು. ನೌಕೆಗಳು ಹೊರಡುವಮುನ್ನ ರಾರಾಜನು ದೇವತೆಗಳನ್ನು ಸಂತೃಪ್ತಿಗೊಳಿಸಲು ಪೂಜೆಪುನಸ್ಕಾರಗಳನ್ನು ಸಲ್ಲಿಸಿದನು. ಬಲಿಯನ್ನು ಅರ್ಪಿಸಿದನು. ಕಾಂಶುಕನೆಂಬ ದೈವಜ್ಞನೊಬ್ಬನನ್ನು ನೌಕೆಗಳಿಗೆ ಮಾರ್ಗದರ್ಶಕನಾಗಿ ನೇಮಿಸಲಾಯಿತು. ಆದರೆ ವಾಸ್ತವವಾಗಿ ಕಾಂಶುಕನು ಅಷ್ಟೇನೂ ಕಡಲಮಾರ್ಗವನ್ನು ಅರಿತವನಲ್ಲ. ಅವನೊಬ್ಬ ದೈವಜ್ಞನು ಮಾತ್ರ. ಆದರಿಂದ ಗ್ರೀಕ್ ನೌಕೆಗಳು ಅನುಭವಸ್ಥನಾದ ಮಾರ್ಗದರ್ಶಕನಿಲ್ಲದೆ ಪ್ರಯಾಣ ಹೊರಟವು. ಆ ಕಾರಣದಿಂದಲೇ ಅವರು ಟ್ರಾಯ್‌ನಗರಕ್ಕೆ ಹೋಗುವಬದಲಾಗಿ ದಕ್ಷಿಣದಲ್ಲಿರುವ ಮಿಸಿಯಾ ತೀರವನ್ನು ಸೇರಿಕೊಂಡರು.

ಗ್ರೀಕ್ ಸೈನಿಕರು ತಾವು ಟ್ರಾಯ್‌ತೀರವನ್ನು ಸೇರಿಕೊಂಡೆವೆಂದು ಭಾವಿಸಿ, ನೌಕೆಗಳಿಂದ ಇಳಿದು ಸುತ್ತಮುತ್ತಲಿದ್ದ ಹಳ್ಳಿಗಳಮೇಲೆ ಬಿದ್ದು ಕೊಳ್ಳೆಹೊಡೆಯಲಾರಂಭಿಸಿದರು. ಬೇಹುಗಾರರಿಂದ ಸುದ್ದಿ ತಿಳಿದ ಮಿಸಿಯಾ ರಾಜನು ತನ್ನ ಸೈನ್ಯದೊಂದಿಗೆ ಗ್ರೀಕರಮೇಲೆ ಬಿದ್ದನು. ನಂತರ ನಡೆದ ಹೋರಾಟದಲ್ಲಿ ಗ್ರೀಕರು ತುಂಬಾ ನಷ್ಟ ಹೊಂದಿದರು. ವಜ್ರಕಾಯನು ಅಲ್ಲಿಗೆ ಬಂದು ಮಿಸಿಯಾ ಸೈನ್ಯವನ್ನು ಚದರಿಸಿದನು. ಒಂದು ವೇಳೆ ಅವನು ಬರುವುದು ತಡವಾಗಿದ್ದರೆ ಗ್ರೀಕರು ಸಂಪೂರ್ಣವಾಗಿ ನಾಶವಾಗುತ್ತಿದ್ದರು.

ತಾವು ಸೇರಿದುದು ಟ್ರಾಯ್ ನಗರವಲ್ಲವೆಂದು ಗ್ರೀಕರು ಗ್ರಹಿಸಿದರು. ತಮ್ಮ ನೌಕೆಗಳನ್ನು ಹತ್ತಿ ಮುಂದೆ ಪ್ರಯಾಣ ಹೊರಟರು. ಆದರೆ ಸಮುದ್ರದ ಮೇಲೆ ಚಂಡಮಾರುತ ಬೀಸಲಾರಂಭಿಸಿತು. ನೌಕೆಗಳು ಚೆಲ್ಲಾಪಿಲ್ಲಿಯಾಗಿ ತಲಾ ಒಂದೊಂದು ಕಡೆ ಹೋದುವು.

ಅನಂತರ ಅವುಗಳು ಒಂದುಕಡೆ ಸೇರಲೇ ಇಲ್ಲ. ಪ್ರತಿಯೊಬ್ಬ ಗ್ರೀಕ್ ರಾಜನೂ ತನ್ನ




ನೌಕೆಗಳನ್ನು ತನ್ನ ದೇಶದ ಕಡೆ ನಡೆಯಿಸಿ ಕೊಂಡು ಹೊರಟುಬಿಟ್ಟನು. ಟ್ರಾಯ್‌ನಗರದ ಮೇಲಿನ ಮೊದಲನೇಯ ಮುತ್ತಿಗೆ ಈ ರೀತಿ ವಿಫಲವಾಯಿತು.

ಆದರೆ ಒಂದು ವರ್ಷ ಪೂರ್ತಿಯಾಗುವ ಮೊದಲೇ ಗ್ರೀಕ್ ದಳಗಳು ಟ್ರಾಯ್‌ನಗರದ ಮೇಲೆ ಮತ್ತೆ ಯುದ್ಧ ಸನ್ನದ್ಧವಾದುವು. ಬಹಳ ದಿನ ಗಾಳಿ ಅನುಕೂಲವಾಗಿರಲಿಲ್ಲ. ದೇವತೆಗಳಿಗೆ ಬಲಿ ಕೊಟ್ಟನಂತರ ಅನುಕೂಲ ವಾಗಿ ಬೀಸಲಾರಂಭಿಸಿತು.

ನೌಕೆಗಳು ಸಾಗರದಲ್ಲಿ ಮುಂದೆ ಹೊರಟವು. ಅವು ದೀರ್ಘಪ್ರಯಾಣ ಮಾಡಿ ಲೆಸ್ಬೋಸ್ ದ್ವೀಪವನ್ನು ಮುಟ್ಟಿದುವು. ಈ ದ್ವೀಪವನ್ನು ಆಳುತ್ತಿದ್ದ ರಾಜ ಗ್ರೀಕ್ ಸೇನೆ ಯನ್ನು ಆದರದಿಂದ ಬರಮಾಡಿಕೊಂಡನು. ಆದರೋಪಚಾರಗಳನ್ನು ಮಾಡಿದನು. ಆದ ರೊಂದು ಷರತು ಹಾಕಿದ. ಅತಿಥಿಗಳನ್ನು ತನ್ನೊಂದಿಗೆ ಮಲ್ಲಯುದ್ಧಕ್ಕೆ ಆಹ್ವಾನಿಸಿದನು.

ಆತನು ಮಲ್ಲಯುದ್ಧದಲ್ಲಿ ಗಟ್ಟಿನ ಪ್ರಚಂಡ. ಗ್ರೀಕರ ಪರವಾಗಿ ರೂಪಧರನು ಆತನೊಂದಿಗೆ ಮಲ್ಲಯುದ್ಧ ಮಾಡಲು ಅಂಗೀಕರಿಸಿ, ಆತ ನನ್ನು ಪರಾಭವಗೊಳಿಸಿದನು. ಇದರಿಂದ ಗ್ರೀಕರ ಆನಂದಕ್ಕೆ ಎಣೆ ಇರಲಿಲ್ಲ. ಅವರ ನೌಕೆಗಳು ಅಲ್ಲಿಂದ ಹೊರಟು ಟೆನೆಡೋಸ್ ದ್ವೀಪವನ್ನು ಮುಟ್ಟಿದುವು.

ಟ್ರಾಯ್‌ನಗರ ಟೆನೆಡೋಸ್ ದ್ವೀಪದಿಂದ ಸುಮಾರು ಇಪ್ಪತ್ತುಮೈಲಿ ದೂರದಲ್ಲಿತ್ತು.



ಟ್ರಾಯ್ ಕೋಟೆಗೋಡೆಯ ಮೇಲೆ ಏರಿ ನಿಂತು ನೋಡಿದರೆ ದ್ವೀಪ ಕಾಣಿಸುತಿತ್ತು. ಯಾವತ್ತೂ ಸೈನ್ಯವನ್ನು ಆ ದ್ವೀಪದಲ್ಲೇ ಬಿಟ್ಟು ರೂಪಧರ, ಭುವನಸುಂದರಿಯ ಪತಿ ಪ್ರತಾಪ, ಪ್ರಭೋ ದರು ಟ್ರಾಯ್‌ನಗರಕ್ಕೆ ರಾಯಭಾರಹೊರ ಟರು. ಸವಿಮಾತಿನಲ್ಲಿ ಭುವನಸುಂದರಿಯನ್ನು ಬಿಡಿಸಿಕೊಂಡು ಬರುವುದೇ ಅವರ ಉದ್ದೇಶ ವಾಗಿತ್ತು. ಆದರೆ ಟ್ರಾಯ್‌ನಗರದ ಪ್ರಜೆಗಳು ಆಕೆಯನ್ನು ಗ್ರೀಕರಿಗೆ ಒಪ್ಪಿಸಬಾರದೆಂದು ಸಂಕಲ್ಪಮಾಡಿದ್ದರು.

ಗ್ರೀಕರ ರಾಯಭಾರ ವಿಫಲವಾದು ದಷ್ಟೇ ಅಲ್ಲ, ಅವರನ್ನು ಕೊಲ್ಲಲೂ ಸಹ ಕೆಲವು ಕಡೆ ಪ್ರಯತ್ನಗಳಾದುವು. ಆದರೆ ಈ ರಾಯಭಾರಿಗಳಿಗೆ ಆತಿಥ್ಯಕೊಟ್ಟ ಗೃಹ

ಸ್ಥನು ಅಡ್ಡ ಬಂದು ರಾಯಭಾರಿಗಳನ್ನೂ. ದೂತರನ್ನೂ ಸಾಯಿಸುವುದಕ್ಕಿಂತ ನೀಚವಾದ, ಹೇಯವಾದ ಕಾರ್ಯ ಬೇರೊಂದಿಲ್ಲವೆಂದೂ, ಅಂತಹ ಹೀನಕಾರ್ಯಕ್ಕೆ ತಾನು ಸಮ್ಮತಿಸಲಾರೆನೆಂದೂ ಖಂಡಿತವಾಗಿ ನುಡಿದನು.

ಕಡೆಯ ರಾಯಭಾರ ವಿಫಲವಾದ ಕೂಡಲೇ ಗ್ರೀಕ್ ಪಡೆಗಳು ಟೆನೆಡೋಸೀ ದ್ವೀಪದಿಂದ ಟ್ರಾಯ್ ನಗರದಕಡೆ ಪ್ರಯಾಣಮಾಡಿದುವು. ನೌಕೆಗಳು ಲಂಗರು ಹಾಕಿದ ಸ್ಥಳದಿಂದ ಟ್ರಾಯ್‌ನಗರ ಕೋಟೆಗೋಡೆಗಳು ಕಾಣಿಸುತ್ತಿದ್ದುವು. ಗ್ರೀಕರ ಚಲನೆವಲನೆಗಳನ್ನು ಕಂಡು ಟ್ರಾಯ್‌ನಗರದ ಜನಸ್ತೋಮವೆಲ್ಲಾ ಸಮುದ್ರತೀರಕ್ಕೆ ಬಂದು ನೌಕೆಗಳಮೇಲೆ ಕಲ್ಲಿನ ಮಳೆ ಸುರಿಸಿ ಅವರನ್ನು ಗಾಯಗೊಳಿಸಲು ಪ್ರಯತ್ನಿಸಿದರು. ಆದರೂ ನೌಕೆಗಳು ಭಾರಿ ನಷ್ಟ ಹೊಂದದೆ ತೀರವನ್ನು ಸೇರಿಕೊಂಡವು.

ಗ್ರೀಕರಿಗೆ ಒಂದು ಕ್ಲಿಷ್ಟ ಸಮಸ್ಯೆ ಎದುರಾಯಿತು. ಟ್ರಾಯ್‌ನಗರದ ನೆಲದಮೇಲೆ ಯಾರು ಮೊದಲು ಹೆಜ್ಜೆಯಿಡಬೇಕು? ಈ ಸಮಸ್ಯೆಗೆ ಕಾರಣವಿಷ್ಟೆ. ಮೊಟ್ಟಮೊದಲು ಟ್ರಾಯ್ ನೆಲದಮೇಲೆ ಹೆಜ್ಜೆಯಿಟ್ಟ ಯೋಧನು ಯುದ್ಧದಲ್ಲಿ ಪ್ರಪ್ರಥಮವಾಗಿ ಮರಣಿಸುವನೆಂದು ಭವಿಷ್ಯನುಡಿದಿತ್ತು. ಆದರಿಂದ ವಜ್ರಕಾಯನಂತಹ ಧೈರ್ಯಶಾಲಿ ಸಹ ತುಸು ಹಿಂದೇಟು ಹಾಕಿದನು.

ಮೊಟ್ಟಮೊದಲು ನೌಕೆಯಿಂದ ಇಳಿಯಲು ಸಂಸಿದ್ಧನಾದ ಭೂಪನೆಂದರೆ ಚಂದ್ರಪ್ರಭನು. ಅವನು ನೌಕೆಯಿಂದ ತೀರಕ್ಕೆ ಹಾರಿ ಶತ್ರುಗಳನೇಕರನ್ನು ಸಂಹರಿಸಿದನು. ಆದರೆ ಭವಿಷ್ಯವಾಕ್ಯ ಸುಳ್ಳಾಗಲಿಲ್ಲ. ಕೊನೆಗೆ ಅವನು ವೀರಸಿಂಹನಿಂದ ಹತನಾದನು.

ಚಂದ್ರಪ್ರಭನಾದ ನಂತರ ವಿರಾಧಿವೀರನಾದ ವಜ್ರಕಾಯನು ರಣೋತ್ಸಾಹ ಪರವಶನಾಗಿ ನೌಕೆಯಿಂದ ದಡಕ್ಕೆ ಹಾರಿದನು. ಅವನೊಂದಿಗೆ ಬಂದ ಸೈನಿಕರು ಅವನನ್ನು ಹಿಂಬಾಲಿಸಿದರು. ವಜ್ರಕಾಯನು ಹಲವಾರು ಟ್ರಾಯ್ ವೀರರನ್ನು ಕೊಲ್ಲಲು, ಉಳಿದ ಟ್ರಾಯ್ ನಗರವಾಸಿಗಳು ನಗರದೊಳಕ್ಕೆ ಪಲಾಯನಮಾಡಿದರು. ಈವೇಳೆಗೆ ಉಳಿದ ಗ್ರೀಕ್‌ಸೈನ್ಯವೆಲ್ಲಾ ಹಡಗುಗಳಿಂದ ಕೆಳಗಿಳಿಯಿತು. (ಇನ್ನೂ ಇದೆ)





# ಅಗ್ನಿಪರೀಕ್ಷೆ

**ಕಾಂ**ಭೋಜದೇಶದ ಅರಸನ ಹೆಸರು ಚಿತ್ರವರ್ಮ. ಆತನು ಸಿಂಹಾಸನಾಧೀಶ್ವರನಾದರೂ ಸಹ ವಿವಾಹಮಾಡಿಕೊಂಡಿರಲಿಲ್ಲ. ಸಂಸಾರ ಬಂಧನ ವಿಲ್ಲದಿದ್ದುದರಿಂದ ಆಗಿಂದಾಗ್ಗೆ ಬೇಟೆಯಾಡುವುದರಲ್ಲಿ ಕಳೆಯುತ್ತಿದ್ದನು. ಆತನಿಗೆ ವಿವಾಹವಾಗುವ ಉದ್ದೇಶವಿಲ್ಲವೆಂದು ಭಾವಿಸಿದ ಸಭಿಕರು ಮತ್ತು ನಗರ ಪ್ರಮುಖರು ಒಂದು ದಿನ ಆತನನ್ನು ಸಮೀಪಿಸಿ "ಮಹಾಪ್ರಭು, ನಮಗೆ ಪಟ್ಟದ ಅರಸಿ ಇಲ್ಲದಿರುವುದು ತುಂಬಾ ಕೊರತೆಯಾಗಿದೆ. ಮಗನನ್ನು ಪಡೆಯುವುದು ನಿಮ್ಮ ಮನೆತನಕ್ಕೆ, ಭವಿಷ್ಯಪ್ರಗತಿಗೆ ಆವಶ್ಯಕವಾದಂತೆ, ಯುವರಾಜನಿರುವುದು ದೇಶಕ್ಕೂ ಆವಶ್ಯಕ. ಅದರಿಂದ ತಾವು ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಕೂಡಲೇ ವಿವಾಹಮಾಡಿಕೊಳ್ಳಬೇಕು" ಎಂದು ಪ್ರಾರ್ಥಿಸಿದರು.

ಚಿತ್ರವರ್ಮನು ಕೊಂಚಹೊತ್ತು ಯೋಚಿಸಿ "ನಿಮ್ಮ ಮಾತನ್ನು ತೆಗೆದುಹಾಕಲು ನನಗಿಷ್ಟವಿಲ್ಲ. ಆದರೊಂದು ಷರತ್ತು. ನಾನು ನನಗೊಪ್ಪಿದ ಕನ್ಯೆಯನ್ನು ವಿವಾಹವಾಗುವೆನು. ಆಕೆಯ ಕುಲಗೋತ್ರ, ಅಂತಸ್ತುಗಳ ವಿಷಯದಲ್ಲಿ ನೀವು ತಲೆಹಾಕಬಾರದು. ಎಲ್ಲರೂ ಆಕೆಯನ್ನು ಮಹಾರಾಣಿಯಾಗಿ ಸ್ವೀಕರಿಸಿದ್ದಾದರೆ ಕೂಡಲೇ ವಿವಾಹವಾಗುವೆನು" ಎಂದನು.

ಈ ನಿಯಮಕ್ಕೆ ಸಚಿವರು ಮತ್ತು ಸಾಮಂತರು ಸಂತೋಷದಿಂದ ತಮ್ಮ ಸಮ್ಮತಿಯಿತ್ತರು. ಆತನು ಆರಿಸಲಿರುವ ಕನ್ಯೆಯ ವಿಷಯ ಅವರಿಗೆ ತಿಳಿಯದು. ನಗರಕ್ಕೆ ಹೊಂದಿಕೊಂಡಿದ್ದ ಒಂದು ಗ್ರಾಮದಲ್ಲಿ ಬಡರೈತನೊಬ್ಬನಿಗೆ ಗುಣವತಿ ಎಂಬ ಮಗಳಿದ್ದಳು. ಆಕೆ ಸಹಜ ಸೌಂದರ್ಯವತಿ. ನಗನಟ್ಟುಗಳಿಲ್ಲದಿದ್ದರೂ, ಭಾರಿ ಸೀರೆ ಮತ್ತು ಅಲಂಕಾರಗಳಿಲ್ಲದಿದ್ದರೂ ಆಕೆ ಬಹಳ ಅಂದವಾಗಿ ಕಾಣುತ್ತಿದ್ದಳು. ಆ ಸೌಂದರ್ಯಕ್ಕೆ ತಕ್ಕಂತೆ ಆಕೆ ಶಾಂತಪ್ರಿಯಳು. ಗುಣವತಿಯನ್ನು ನೋಡಿದಾಗಲಿಂದ ತಾನು ಮದುವೆಯಾದರೆ ಆ ಕನ್ಯೆಯನ್ನೇ ವಿವಾಹವಾಗಬೇಕೆಂದು ನಿರ್ಧರಿಸಿದ ಚಿತ್ರವರ್ಮ. ಆದರೆ ತಾನು ರಾಜನಾದ

ಕೆ. ರಂಗನಾಥರಾಯ

ಪ್ರಯುಕ್ತ ಬಡರೈತನ ಮಗಳನ್ನು ವಿವಾಹವಾಗಲು ಅವಕಾಶವಿರಲಿಲ್ಲ. ಒಂದುವೇಳೆ ಮದುವೆಯಾದರೂ ಮಂತ್ರಿ ಸಾಮಂತರು ತನ್ನ ಮೇಲೆ ಕತ್ತಿ ಮಸೆಯುವುದಂತೂ ಖಂಡಿತ ಎಂದು ಅರಿತಿದ್ದ ಅರಸ. ಪ್ರಜೆಗಳು ಆಕೆಯನ್ನು ತಮ್ಮ ರಾಣಿಯನ್ನಾಗಿ ಸ್ವೀಕರಿಸಲು ಒಪ್ಪಲಾರರು. ಎಂತಲೇ ಚಿತ್ರವರ್ಮನು ಆಜನ್ಮಬ್ರಹ್ಮಚಾರಿಯಾಗಿರಲು ನಿಶ್ಚಯಿಸಿದ್ದ.

ಚಿತ್ರವರ್ಮನು ಮದುಮಗಳ ವಿಷಯವನ್ನು ಯಾರಿಗೂ ತಿಳಿಸದೆ, ಮದುವೆಗೆ ಮುಹೂರ್ತ ವಿಡಿಸಿ, ಸಕಲ ಏರ್ಪಾಟುಗಳನ್ನು ಮಾಡಿಸಿ, ತಾನು ಮದುಮಗನ ವೇಷಧರಿಸಿ, ಪುರೋಹಿತ ಮತ್ತು ಪರಿವಾರದೊಂದಿಗೆ ಮಿತಿಯಿಲ್ಲದಷ್ಟು ಉಡುಗೊರೆಗಳನ್ನು ತೆಗೆದುಕೊಂಡು ಗುಣವತಿಯ ಮನೆಗೆ ಹೊರಟನು. ಮದುಮಗನ ಪಲ್ಲಕ್ಕಿ ಬಡರೈತನ ಮನೆಯ ಮುಂದೆ ನಿಂತ ಕೂಡಲೇ ಎಲ್ಲರೂ ದಂಗಾದರು. ಮದುವೆಯ ಮನೆಯ ಮುಂದೆ ಹಸಿರುವಾಣಿ ಚಪ್ಪರವಿರಲಿಲ್ಲ. ಎಲ್ಲಾ ಬೋಳು ಬೋಳಾಗಿತ್ತು.

ಚಿತ್ರವರ್ಮನು ರೈತನ ಮನೆಯನ್ನು ಪ್ರವೇಶಿಸಿ ರೈತನೊಂದಿಗೆ "ನಿನ್ನ ಮಗಳನ್ನು ಇತ್ತ ಕರೆ" ಎಂದ. ಹೆದರುತ್ತಾ ಬೆದರುತ್ತಾ ಗುಣವತಿ ಮೆಲ್ಲನೆ ಬಂದಳು. "ನಿನ್ನನ್ನು ವಿವಾಹವಾಗಲು ಬಂದೆ. ನಿನಗೆ ಸಮ್ಮತವೇ?" ಎಂದು ಕೇಳಿದ ಚಿತ್ರವರ್ಮ. "ನನ್ನ ಪೂರ್ವಜನ್ಮದ ಸುಕೃತ" ಎಂದಳು ಗುಣವತಿ. ಕೂಡಲೇ ರಾಜಭಟರು ಆ ಮನೆಗೆ ಚಪ್ಪರಹಾಕಿ ಅಲಂಕರಿಸಿದರು. ಮುತ್ತೈದೆಯರು ಗುಣವತಿಗೆ ಪೀತಾಂಬರವನ್ನು



ಉಡಿಸಿ, ರತ್ನಾಭರಣಗಳನ್ನು ತೊಡಿಸಿ, ಮದು ಮಗಳನ್ನಾಗಿ ಮಾಡಿದರು. ಸುಮುಹೂರ್ತದಲ್ಲಿ ಚಿತ್ರವರ್ಮ ಗುಣವತಿಯರ ವಿವಾಹವಾಯಿತು. ಈಮೊದಲೇ ವಚನವಿತ್ತಿದ್ದರಾದುದರಿಂದ ಸಚಿವ ಸಾಮಂತರು ಬಾಯಿ ತೆರೆಯಲಿಲ್ಲ. ಮದುವೆ ಮುಗಿದಕೂಡಲೇ ಚಿತ್ರವರ್ಮನು ಪತ್ನೀಸಮೇತ ನಾಗಿ ಅರಮನೆಗೆ ಹಿಂತಿರುಗಿದನು.

ಆದರೆ ಕೀಳುಜಾತಿಯಾಕೆ ತಮ್ಮ ರಾಣಿಯಾದ ಳೆಂಬ ಭಾವನೆಮಾತ್ರ ರಾಜನ ಸಿಬ್ಬಂದಿಯಲ್ಲಿ ನೆಲಸಿತ್ತು. ಪ್ರಜೆಗಳ ವಿಷಯ ಬೇರೆ ಹೇಳಬೇಕಿಲ್ಲ. ಅವರಿಗೆ ತಮ್ಮ ರಾಣಿಯಮೇಲೆ, ಆಕೆಯನ್ನು ಕೋರಿ ವಿವಾಹವಾದ ರಾಜನಮೇಲೆ ಉದಾಶೀನ ಭಾವ ಬೆಳೆದಿತ್ತು. ಬಾಯಿ ತೆರೆದು ಹೇಳಲಿಲ್ಲ. ಚಿತ್ರವರ್ಮನೇನೂ ಮೂಢನಲ್ಲ. ತನ್ನ ರಾಜ್ಯ ದಲ್ಲಿ ಈ ವಿವಾಹವನ್ನು ಅನುಮೋದಿಸು ವವರು ಒಬ್ಬರೂ ಇಲ್ಲವೆಂದು ಅರಿತಿದ್ದ. ಅವರ ಮನಸ್ಸನ್ನು ಬದಲಾಯಿಸುವುದು ತನ್ನ ಧರ್ಮ ವೆಂದು ಆತನು ಅರಿತಿದ್ದ.

ಒಂದು ದಿನ ಆತನು ಗುಣವತಿಯೊಂದಿಗೆ "ನನ್ನ ಪತ್ನಿಯಾದುದರಿಂದ ನಿನಗೆ ಸದಾ ಸುಖಸಂಪತ್ತುಗಳೇ ಇರುವುವೆಂದು ಭಾವಿಸ ಬೇಡ. ಅರಸರ ಜೀವನ ಕತ್ತಿಯಮೇಲೆ ಕಸ ರತ್ತು ಮಾಡಿದಂತೆ. ಅನೇಕ ಆಪತ್ತುಗಳನ್ನು ಇದಿರಿಸಬೇಕಾಗಿ ಬರಬಹುದು. ಆ ವಿಷಯ ಆಲೋಚಿಸಿರುವೆಯಾ ?" ಎಂದು ಕೇಳಿದ.

"ಸ್ವಾಮಿ, ಈ ವೈಭವಗಳು ನನಗೆ ಅಗತ್ಯ ವಿಲ್ಲ. ನಿಮ್ಮೊಂದಿಗೆ ಅರಣ್ಯದಲ್ಲಿರಲೂ ಸಿದ್ಧ. ನಿಮಗಾಗಿ ಯಾವತ್ಯಾಗವನ್ನಾದರೂ ಮಾಡ





ಬಲ್ಲೆ" ಎಂದಳು ಗುಣವತಿ. ಚಿತ್ರವರ್ಮನು ಆನಂದತುಂದಿಲನಾದನು. ಆದರೆ ಅದನ್ನು ಹೊರಗೆ ತೋರಿಸಿಕೊಳ್ಳಲಿಲ್ಲ.

ಕಾಲಕ್ರಮೇಣ ಗುಣವತಿ ಒಬ್ಬ ಮಗಳನ್ನು ಹೆತ್ತಳು. ಚಿತ್ರವರ್ಮನು ಸೂತಕ ಗೃಹಕ್ಕೆ ಹೋಗಿ ಗುಣವತಿಯೊಂದಿಗೆ "ನೀನು ಹೆಣ್ಣು ಮಗುವನ್ನು ಹಡೆದೆಯೆಂದು ಪ್ರಜೆಗಳು ಬೇಸರ ಗೊಂಡಿರುವರು. ಗಂಡು ಮಗುವಾಗಿದ್ದರೆ ಸಹಿಸಿ ಕೊಳ್ಳುತ್ತಿದ್ದರೋ ಏನೋ" ಎಂದ. ಗುಣವತಿ ಮೌನವಾಗಿ ಕಣ್ಣೀರು ತುಂಬಿದಳು.

ಮಾರನೇಯ ದಿನ ನಾಮಕರಣ ಮಹೋತ್ಸವ. ಆಗ ಅಂತಃಪುರದ ಭಟನೊಬ್ಬನು ಕಳವಳ ತುಂಬಿದ ವದನದಿಂದ ಗುಣವತಿಯನ್ನು ಸಮೀಪಿಸಿ "ತಾಯೇ, ಮಹಾಪ್ರಭುಗಳ ಅಪ್ಪಣೆ ಯಾಗಿದೆ. ಮಗುವನ್ನಿತ್ತ ಕೊಡಿ. ಆಕೆಯನ್ನು ತೆಗೆದುಕೊಂಡು...." ಮುಂದೆ ಮಾತು ಹೊರಡದಾಯಿತು. "ಚಿಂತಿಸಬೇಡಪ್ಪ. ಪ್ರಭುಗಳು ಹೇಳಿದಂತೆ ನಡೆಯುವುದು ನಮ್ಮೆಲ್ಲರ ಕರ್ತವ್ಯ" ಎಂದು ತೊಟ್ಟಿಲಲ್ಲಿದ್ದ ತನ್ನ ಮಗಳನ್ನು ಎತ್ತಿ ಮುದ್ದಾಡಿ ಭಟನವಶಕ್ಕೆ ಒಪ್ಪಿಸಿ, "ತಮ್ಮಾ, ಪ್ರಭುಗಳು ಈ ಹಸುಳೆಯನ್ನೇನು ಮಾಡಬೇಕೆಂದು ಹೇಳಿದರೋ ಆ ಕೆಲಸ ಮುಗಿಯುವ ತನಕವಾದರೂ ನನ್ನ ಕಂದಮ್ಮನಿಗೆ ಯಾವ ತೊಂದರೆಯೂ ಉಂಟಾಗದಂತೆ ನೋಡಿಕೊ" ಎಂದಳು. ಭಟನು ಕಣ್ಣೀರು ಸುರಿಸಿದ. ಗುಣವತಿಗೆ ದುಃಖ ಉಮ್ಮಳಿಸಿ ಬಂತು.

ಚಿತ್ರವರ್ಮನು ಮಗಳನ್ನು ರಹಸ್ಯವಾಗಿ ತನ್ನ ಸೋದರಮಾವನು ಆಳುತ್ತಿದ್ದ ಭೀಮಪುರಿಗೆ ಕಳುಹಿಸಿದ. ಅಲ್ಲಿ ರಾಜಕುಮಾರಿಗೆ ಯಾವ ಕೊರತೆಯೂ ಉಂಟಾಗದಂತೆ ಸಕಲ ಏರ್ಪಾಟುಗಳನ್ನು ಮಾಡಿದ. ಈ ವಿಷಯ ಗುಣವತಿಗಾಗಲೀ, ಮಂತ್ರಿ ಸಾಮಂತರಿಗಾಗಲೀ, ಕಾಂಭೋಜ ಪ್ರಜೆಗಳಿಗಾಗಲೀ ತಿಳಿಯದು. ರಾಜನು ತನ್ನ ಮಗಳನ್ನು ಕೊಲ್ಲಿಸಿದನೆಂಬ ಸುದ್ದಿ ರಾಜ್ಯದಲೆಲ್ಲಾ ಹಬ್ಬಿತು. ಈ ಸಂಗತಿ ಕೇಳಿದನಂತರ ಪ್ರಜೆಗಳಲ್ಲಿ ತುಸಮಟ್ಟಿಗೆ ಗುಣವತಿಯ ಮೇಲೆ ಸಹಾನುಭೂತಿಯುಂಟಾಯಿತು. "ರಾಜನು ಆಕೆಯನ್ನು ವಿವಾಹವಾಗಕೂಡದಿತ್ತು. ಮದುವೆಯಾದ ನಂತರ ಮಕ್ಕಳು ಹುಟ್ಟಿದರೆ ಕೊಲ್ಲುವುದುಂಟೇ? ಯಾವ ಪಾಪವೂ ಅರಿಯದ ಆ ಹೆಣ್ಣುಮಗಳಿಗೆ ಎಂತಹ ಕಷ್ಟ

ಬಂತು. ಪಾಪ, ಪಾಪ" ಎಂದುಕೊಂಡರು ಜನ. ಮೂರು ನಾಲ್ಕು ವರ್ಷಗಳು ಕಳೆದುವು.

ಗುಣವತಿ ಮತ್ತೊಮ್ಮೆ ಗರ್ಭಿಣಿಯಾಗಿ ಗಂಡುಮಗನನ್ನು ಹಡೆದಳು. ಈಸಾರಿಯೂ ಚಿತ್ರವರ್ಮನು ಸೂತಕಗೃಹಕ್ಕೆ ಹೋಗಿ ಹೆಂಡತಿಯೊಂದಿಗೆ "ನೀನು ಮಗನನ್ನು ಹಡೆದೆ ಎಂದು ತಿಳಿದು ಪ್ರಜೆಗಳು ಉರಿದು ಬೀಳುತ್ತಿರುವರು. 'ಈ ಒಕ್ಕಲಿಗನು ನಮಗೆ ಅರಸನಾಗುವುದೇ?' ಎಂದು ಸಿಡಿಮಿಡಿಗೊಂಡಿದ್ದಾರೆ" ಎಂದ. ಗುಣವತಿ ಕಣ್ಣಿಂದ ನೀರು ಧಾರಾಕಾರವಾಗಿ ಸುರಿಯಿತು. ಮತ್ತೆ ಹತ್ತನೇಯ ದಿನ ಮಗನನ್ನು ತನ್ನ ಹೆಂಡತಿಯಿಂದ ದೂರಮಾಡಿ, ಅವನನ್ನೂ ಸಹ ರಹಸ್ಯವಾಗಿ ಭೀಮಪುರಿಗೆ ಕಳುಹಿಸಿಬಿಟ್ಟನು.

ರಾಜನು ತನ್ನ ಮಗಳನ್ನು ಕೊಲ್ಲಿಸಿದಂತೆ ಮಗನನ್ನೂ ಸಹ ಕೊಲ್ಲಿಸಿದನೆಂದು ಕಾಳ್ಗಿಚ್ಚಿನಂತೆ ಸುದ್ದಿ ಹರಡಿತು. ಈಸಾರಿ ಮಂತ್ರಿ ಸಾಮಂತರಿಗೂ ಸಹ ಗುಣವತಿಯ ವಿಷಯದಲ್ಲಿ ಕನಿಕರವುಂಟಾಯಿತು. ನೂರುಪಾಲು ರೈತರ ರಕ್ತವಿರುವ ಗುಣವತಿಯೇ ಮಹಾರಾಣಿಯಾಗಿರಲು, ಅರ್ಧ ಕ್ಷತ್ರಿಯ ರಕ್ತವಿರುವ ಹುಡುಗನೇಕೆ ರಾಜನಾಗಬಾರದು? ರಾಜನು ಗುಣವತಿಯನ್ನು ಮದುವೆಯಾಗಲೇ ಬಾರದಿತ್ತು. ಆದನಂತರ ಆಕೆಗೆ ಜನಿಸಿದ ಮಕ್ಕಳನ್ನು ಕೊಲ್ಲುವುದು ಅಕ್ರಮ" ಎಂದು ಗೊಣಗಿದರು.

ಎರಡು ಬಾರಿ ಹೀಗೆ ನಡೆದರೂಸಹ ಗುಣವತಿ ತನ್ನ ಅಳಲನ್ನು ಗಂಡನ ಮುಂದೆಯಾಗಲೀ,



ಇತರರೊಂದಿಗಾಗಲೀ ಹೇಳಿಕೊಳ್ಳಲಿಲ್ಲ. ಆಕೆ ರಾಣಿಯಾಗಿ ತನ್ನ ಕರ್ತವ್ಯಗಳನ್ನು ಬಹು ಶ್ರದ್ಧೆಯಿಂದ ನಿರ್ವಹಿಸುತ್ತಾ ಅರಮನೆಯ ಶಾಂತಿಗೆ ಭಂಗ ಬರದಂತೆ ನೋಡಿಕೊಳ್ಳುತ್ತಿದ್ದಳು. ತನ್ನ ಹೆಂಡತಿಯ ಸಾಹಸವನ್ನು ಕಂಡು ಚಿತ್ರವರ್ಮನು ಸಂತಸಗೊಂಡನು. ಆದರೆ ತನ್ನ ಸಂತೋಷವನ್ನು ಹೊರಗೆ ವ್ಯಕ್ತಪಡಿಸಲಿಲ್ಲ. ಮತ್ತೆ ನಾಲ್ಕು ವರ್ಷಗಳನಂತರ ಚಿತ್ರವರ್ಮನು ಗುಣವತಿಯೊಂದಿಗೆ "ನಾನು ನಿನ್ನನ್ನು ಮದುವೆಯಾದುದು ತುಂಬಾ ಅಚಾತುರ್ಯವಾಯಿತು. ನಿನ್ನನ್ನು ತಮ್ಮ ರಾಣಿಯನ್ನಾಗಿ ಪ್ರಜೆಗಳು ಎಂದೂ ಒಪ್ಪಿಕೊಳ್ಳುವಂತಿಲ್ಲ. ಈ ಎಂಟು ವರ್ಷ ತಾಳ್ಮೆಯಿಂದ ಕಾದು ನೋಡಿದೆ. ಲಾಭವಿಲ್ಲ. ಕ್ಷತ್ರಿಯ ಕನ್ಯೆಯೊಬ್ಬಳನ್ನು ವಿವಾಹ

ಮಾಡಿಕೊಳ್ಳಬೇಕೆಂದು ಯೋಚಿಸುತ್ತಿದ್ದೇನೆ. ಏನು ಹೇಳುತ್ತಿ?" ಎಂದು ಕೇಳಿದ.

"ಅದರಲ್ಲಿ ನಿಮ್ಮ ತಪ್ಪೇನಿದೆ? ನೀವು ತುಂಬಾ ದಯಾಶೀಲರು. ಅಂತಲೇ ನಾನು ಅನರ್ಹಳೆಂದು ತಿಳಿದುಕೂಡ ಇಷ್ಟು ದಿನ ತಾಳ್ಮೆಯಿಂದ ಸಹಿಸಿಕೊಂಡುಬಂದಿರಿ. ಬೇರೊಬ್ಬರಾಗಿದ್ದರೆ ನನ್ನನ್ನು ಎಂದೋ ಹೊರಗಟ್ಟುತ್ತಿದ್ದರು. ನನ್ನನ್ನು ತೌರುಮನೆಗೆ ಕಳುಹಿಸಿಬಿಡಿ. ನಿಮ್ಮ ಅಂತಸ್ತಿಗೆ ತಕ್ಕ ಕನ್ಯೆಯನ್ನು ವಿವಾಹವಾಗಿ" ಎಂದಳು ಗುಣವತಿ, ಯಾವ ವಿಧವಾದ ವಾದದುಗುಡವನ್ನೂ ತೋರದೆ. ಅಂದೇ ಚಿತ್ರವರ್ಮನು ಆಕೆಯನ್ನು ತೌರುಮನೆಗೆ ಕಳುಹಿಸಿದನು. ಆಕೆ ತಂದೆಯ ಮನೆಯಲ್ಲಿ ಹಿಂದಿನಂತೆಯೇ ಮನೆ ಗುಡಿಸುವುದು, ಹುಲ್ಲು ತೆಗೆಯುವುದು, ಬೆರಣಿ ತಟ್ಟುವುದು ಮುಂತಾದ ಕೆಲಸ ಬೊಗಸಗಳಲ್ಲಿ ನಿರತಳಾದಳು. ನಿನ್ನೆ ಮೊನ್ನೆಯವರೆವಿಗೆ ಪಟ್ಟದರಸಿಯಾಗಿದ್ದೆನೆಂಬ ದುರಭಿಮಾನ ಕಿಂಚಿತ್ತಾದರೂ ಆಕೆಗಿರಲಿಲ್ಲ. ಯಾವತ್ತೂ ಪ್ರಜೆ ರಾಜನನ್ನು ಶಪಿಸಿದರು.

ಮತ್ತೆ ನಾಲ್ಕು ವರ್ಷಗಳು ಕಳೆದುವು. ಚಿತ್ರವರ್ಮನು ಸಾಮಂತರನ್ನು ಕರೆದು "ನಾನು ಉತ್ತಮ ಕುಲದ ಕನ್ಯೆಯನ್ನು ಮದುವೆಯಾಗಬೇಕೆಂದಿರುವೆನು. ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿದನು.

ಅದಕ್ಕೆ ಅವರು "ಮಹಾಪ್ರಭು, ನೀವು ತಮ್ಮ ಮೊದಲನೇ ಮಡದಿಯನ್ನು ತೊರೆದಾಗಲಿಂದ ಅಂತಃಪುರದಲ್ಲಿ ಅರಾಜಕತೆ, ಅಶಾಂತಿಗಳು ಹೆಚ್ಚಾದವು. ಆಕೆ ತುಂಬಾ ಸಮರ್ಥಳು.



ಕುಲಗೋತ್ರಗಳಿಲ್ಲದಿದ್ದರೂ ಪ್ರಜೆಗಳ ಆದರಾಭಿಮಾನಗಳನ್ನು ಆಕೆ ಪಡೆದಳು. ಪ್ರತಿಯೊಬ್ಬರೂ ಆಕೆಯ ಸದ್ಗುಣಗಳನ್ನು ಕೊಂಡಾಡುತ್ತಿರುವರು. ಈಸಾರಿಯೂ ನೀವು ಕುಲಗೋತ್ರಗಳನ್ನು ಪರಿಗಣಿಸದೆ ಸುಗುಣಿಯಾದ ಕನ್ಯೆಯನ್ನು ವಿವಾಹವಾಗಿ. ನಾವು ಇದಕ್ಕಿಂತಲೂ ಬೇರೇನೂ ಹೇಳಲಾರೆವು" ಎಂದರು. "ಸರಿ, ನಿಮ್ಮಿಷ್ಟದಂತೆ ನಡೆಯುವೆನು. ಸುಮುಹೂರ್ತ ನೋಡಿ" ಎಂದ ಚಿತ್ರವರ್ಮ. ಮುಹೂರ್ತ ನಿರ್ಣಯಿಸಿದರು. ಚಿತ್ರವರ್ಮನು ಗುಣವತಿಯನ್ನು ಅರಮನೆಗೆ ಕರೆಯ ಕಳುಹಿಸಿ "ನಾನು ಮತ್ತೆ ವಿವಾಹಮಾಡಿಕೊಳ್ಳಲಿರುವೆನು. ಅದಕ್ಕೆ ತಕ್ಕ ಏರ್ಪಾಟುಗಳನ್ನು ನಿನ್ನ ಹೊರತು ಬೇರೊಬ್ಬರಿಂದ ಮಾಡಲು ಸಾಧ್ಯವಿಲ್ಲ. ಅಂತಃಪುರದ ವಿಷಯವೆಲ್ಲಾ ನೀಸರಿತಿರುವೆ. ಏನೇನು ಬೇಕು, ಹೇಗೆ ಮಾಡಬೇಕು, ಯಾರನ್ನು ಕರೆಯಬೇಕು ಇತ್ಯಾದಿಗಳ ವಿಷಯ ನೀನರಿತಿರುವೆ. ಇವುಗಳ ಜವಾಬ್ದಾರಿ ನಿನಗೆ ವಹಿಸುವೆನು" ಎಂದ.

"ತಮ್ಮ ಅನುಗ್ರಹ" ಎಂದಳು ಗುಣವತಿ. ಆಕೆಯ ಹೊಟ್ಟೆಯಲ್ಲಿರುವ ದುಃಖ ಯಾರಿಗೂ ತಿಳಿಯದು. ಆದರೆ ಮದುವೆಯ ಏರ್ಪಾಟುಗಳಲ್ಲಿ ಯಾವ ಕುಂದು ಕೊರತೆಯೂ ಇಲ್ಲದಂತೆ ವ್ಯವಸ್ಥಿತವಾಗಿ, ನಿರ್ವಂಚನೆಯಿಂದ ನಡೆಯುತ್ತಿದ್ದುವು. ಇಷ್ಟರಲ್ಲಿ ಚಿತ್ರವರ್ಮನು ತನ್ನ ಮಗ ಮತ್ತು ಮಗಳನ್ನು ತನ್ನ ಸೋದರ ಮಾವನ ರಾಜ್ಯದಿಂದ ಕಾಂಭೋಜ ದೇಶಕ್ಕೆ ಬರಮಾಡಿಕೊಳ್ಳಲು ಏರ್ಪಾಟು ಮಾಡಿದನು. ಅವರು ಬೋಯಿಗಳ ಸಹಾಯದಿಂದ





ಕಾಂಭೋಜದೇಶವನ್ನು ಸೇರಿಕೊಂಡರು. ಚಿತ್ರವರ್ಮನು ಅಟ್ಟಹಾಸದಿಂದ ಮೆರವಣಿಗೆಯಲ್ಲಿ ಹೋಗಿ ಅವರನ್ನು ನಗರಕ್ಕೆ ಸ್ವಾಗತಿಸಿದನು.

ಹನ್ನೆರಡು ವರ್ಷ ಪ್ರಾಯದ ರಾಜಕುಮಾರಿಯನ್ನು ಕಂಡು ಪ್ರಜೆಗಳು ಆಕೆಯೇ ಮದುಮಗಳೆಂದು ಭಾವಿಸಿದರು. ಅನೇಕರು ಈ ಹುಡುಗಿಯನ್ನು ತಮ್ಮ ಹಿಂದಿನ ರಾಣಿಯೊಂದಿಗೆ ಹೋಲಿಸಿ "ಬಟ್ಟೆಬರೆ, ನಗನಟ್ಟುಗಳನ್ನು ಹಾಕಿಕೊಂಡರಾಯಿತೇ? ಆ ಪತಿವ್ರತೆಯ ಸ್ಥಾನವನ್ನು ಈ ಹುಡುಗಿ ಹೇಗೆ ಅಲಂಕರಿಸುವಳು?" ಎಂದುಕೊಂಡರು. ಪ್ರಜೆಗಳು ಭ್ರಮೆಗೊಂಡಂತೆ ಗುಣವತಿಸಹ ಭ್ರಮೆ ಹೊಂದಿದಳು.

ಆಕೆ ಚಿತ್ರವರ್ಮನ ಹತ್ತಿರಕ್ಕೆ ಹೋಗಿ "ಸ್ವಾಮಿ, ನಾನಾ ಸಂಕಷ್ಟಗಳ ಅನುಭವದ ಅಭ್ಯಾಸವಿದ್ದವಳು ನಾನು. ಆದರೆ ಈ ಯುವತಿ ಸುಖದಲ್ಲಿ ಬೆಳೆದವಳು. ಕೋಮಲೆ. ನನ್ನನ್ನು ಕಂಡ ರೀತಿಯಲ್ಲಿ ಈಕೆಯನ್ನು ಕಾಣಬೇಡಿ ಎಂದು ಸೆರಗೊಡ್ಡಿ ಬೇಡಿಕೊಳ್ಳುವೆನು" ಎಂದಳು.

ಆಗ ಅಮಾತ್ಯರೂ, ಅಧಿಕಾರಿಗಳೂ ರಾಜನನ್ನು ಸಮೀಪಿಸಿ "ಪ್ರಭು, ನಿಮ್ಮ ಮೊದಲಿನ ವಿವಾಹ ವಿಷಯದಲ್ಲಿ ನಾವು ತಲೆಹಾಕಲಿಲ್ಲ. ಆದರೆ ಈ ಬಾರಿ ತಾವು ನಮ್ಮ ಮಾತು ನಡೆಯಿಸಿಕೊಡಲೇ ಬೇಕು. ಇನ್ನೂ ಪ್ರಪಂಚ ಜ್ಞಾನವಿಲ್ಲದ ಈ ತರುಣಿಯನ್ನು ನೀವು ವಿವಾಹವಾಗುವುದು ನಮಗೆ ಸರಿಕಾಣಲಿಲ್ಲ. ಹಿಂದಿನ ರಾಣಿಯವರಿಗಿಂತಲೂ ಈಕೆ ಯೋಗ್ಯಳಾಗಿ ವರ್ತಿಸುವಳೆಂಬ ನಂಬಿಕೆ ನಮಗಿಲ್ಲ. ಇನ್ನೂ ಹುಡುಗುತನ ಸಹ ಬಿಟ್ಟಿರುವಂತೆ ತೋರದು" ಎಂದರು. ಚಿತ್ರವರ್ಮನು ನಗುತ್ತಾ "ನೀವು ಹೇಳುವುದೇನು? ಇಂದು ಬಂದ ಹುಡುಗಿ ನನ್ನ ಮಗಳು. ಅವಳ ತಮ್ಮ ನನ್ನ ಮಗ. ನಿಮಗೆ ತಿಳಿಯದೇ?" ಎಂದ.

"ಮತ್ತೆ ಮದುಮಗಳೆಲ್ಲಿ?" ಎಂದು ಕೇಳಿದರು ಮಂತ್ರಿ ಮುಂತಾದವರು ವಿಸ್ಮಯದಿಂದ.

"ಇದೋ" ಎಂದು ರೈತಸ್ತ್ರೀ ವೇಷದಲ್ಲಿದ್ದ ಗುಣವತಿಯನ್ನು ತೋರಿಸಿದನು. ಮಂತ್ರಿಗಳ, ಸಾಮಂತರ, ಗುಣವತಿಯ ಆನಂದಕ್ಕೆ ಪಾರವೇ ಇಲ್ಲ. ಆಕೆ ಸಡಗರದಿಂದ ಓಡಿಹೋಗಿ ಆನಂದಾಶ್ರುಗಳನ್ನು ಸುರಿಸುತ್ತಾ ಮಕ್ಕಳನ್ನು ಅಪ್ಪಿಕೊಂಡಳು. ಆಕೆಗೆ ಇದೊಂದು ಅಗ್ನಿಪರೀಕ್ಷೆ!



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1957 ಮಾರ್ಚಿ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಜನವರಿ 10 ನೇ ತಾರೀಕಿನೊಳಗೆ ನಮಗೆ ಬಂದು ತಲುಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು - 26.**

---

## ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಧನವಿದ್ದರೇ ಜಗತ್ತುಂಟಮ್ಮ, ದಯಮಾಡು!

ಎರಡನೇ ಫೋಟೋ: ಧನಹೀನನಿಗೆ ಧರಣಿ ಮುಳ್ಳುಹಾಸಿಗೆ ನೋಡು!

ಕಳಿಸಿದವರು: ಹೆಚ್. ಸರೋಜ,

1-827, ಸುಲ್ತಾನ ಬತೇರಿ ಬೀದಿ, ಮಂಗಳೂರು - 3.

**ಬಹುಮಾನ ರೂ. 10/-ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**

# ಶಲಭಗಳ ಜೀವನ

ಶಲಭಗಳೂ, ಪಾತರಗಿತ್ತಿಗಳೂ ನೋಡಲಿಕ್ಕೆ ಬಹಳ ಅಂದವಾಗಿರುತ್ತವೆ. ಅವುಗಳು ಬಗೆ ಬಗೆಯ ಬಣ್ಣಗಳಿಂದ ಕಂಗೊಳಿಸುತ್ತವೆ. ಆದರೆ ನಾವು ಅವುಗಳನ್ನು ನೋಡಿ ಆನಂದಿಸುವುದರೊಳಗೇ ಅವುಗಳ ಜೀವನವೇ ಮುಗಿದುಹೋಗುತ್ತದೆ.

ಹೆಣ್ಣು ಶಲಭವು ಎಲೆಯಮೇಲೆ ಮೊಟ್ಟೆಗಳನ್ನಿಡುತ್ತದೆ. ಆ ಮೊಟ್ಟೆಗಳಿಂದ ಸಣ್ಣ ಹುಳುಗಳು ಹೊರಗೆ ಬರುತ್ತವೆ. ಇವು ಎಲೆಗಳನ್ನು ತಿಂದು ಜೀವಿಸುತ್ತಾ ದೊಡ್ಡದಾಗುತ್ತವೆ. ಅವುಗಳು ಬೆಳೆಯುತ್ತಾ ಬಂದಂತೆ ಅವುಗಳ ಶರೀರಗಳೊಂದಿಗೆ ಚರ್ಮ ಬೆಳೆಯುವುದಿಲ್ಲ. ಒಂದು ದಶೆಯಲ್ಲಿ ಚರ್ಮವು ಸುಕ್ಕಿಹೋಗುತ್ತದೆ. ಇನ್ನೊಂದು ಚರ್ಮದಿಂದ ಆ ಹುಳು ಹೊರಗೆ ಬಂದು ಮತ್ತೆ ಸ್ವಲ್ಪಕಾಲ ಬೆಳೆಯುತ್ತೆ. ಕೆಲವು ಎಲೆ ಹುಳುಗಳು ಮೂರು ನಾಲ್ಕು ಸಾರಿ ಚರ್ಮ ಬದಲಾವಣೆ ಮಾಡಿಕೊಳ್ಳುತ್ತವೆ. ಒಮ್ಮೊಮ್ಮೆ ಈ ಹುಳುಗಳು ಮನುಷ್ಯನ ಬೆರಳಿನಷ್ಟು ಮೂರಂಗುಲ ಉದ್ದದ ಹುಳುಗಳಾಗಿ ನಮಗೆ ಕಾಣಿಸುತ್ತವೆ.

ಬೆಳೆಯುವುದು ಪೂರ್ಣವಾದಮೇಲೆ ಆ ಹುಳು ತನ್ನ ಬಾಯಿಯಿಂದ ಸಣ್ಣಗಿನ ದಾರವನ್ನೆಳೆದುಕೊಂಡು ಆದಾರದಿಂದ ತನ್ನ ಸುತ್ತೂ ಅತಿ ಜಾಣತನದಿಂದ ಗೂಡು ನೇದುಕೊಳ್ಳುತ್ತದೆ. ಈ ಗೂಡು ತನ್ನನ್ನು ಎಲ್ಲಾ ಕಡೆಯೂ ಮುಚ್ಚಿಕೊಳ್ಳುವಂತೆಯೂ ತಾನು ರೆಕ್ಕೆಹುಳುವಿನ ರೂಪದಲ್ಲಿ ಸೀಳಿಕೊಂಡು ಹೊರಗೆ ಬರಲಾಗುವ ತೆಳುವಾದ ಬಾಗಿಲಿರುವಂತೆಯೂ ಗೂಡು ನೇದುಕೊಳ್ಳುತ್ತದೆ. ಹಾಗೆ ನೇದುಕೊಂಡ ಗೂಡಿನೊಳಗಿಂದ ರೆಕ್ಕೆಹುಳು ಹೊರಗೆ ಬರುವುದರೊಳಗೆ ಗೂಡಿನಲ್ಲಿ ಅತಿ ವಿಚಿತ್ರವಾದ ಪರಿಣಾಮಗಳುಂಟಾಗುತ್ತದೆ. ಕಡೆಗೆ ಹಾಂತೆಯಾಗಿ ಹೊರಗೆ ಬರುತ್ತೆ. ಆ ಕ್ಷಣದಲ್ಲಿ ಅದರ ದೇಹ ಒದ್ದೆಯಾಗಿದ್ದರೂ ಬೇಗನೇ ಆರಿಹೋಗುತ್ತೆ.

ಗೂಡಿನಿಂದ ಹೊರಗೆ ಭಂದ ಶಲಭ ಮೊಟ್ಟೆಯಿಡುವುದರ ಹೊರತು ಮತ್ತೇನೂ ಅದರ ಜೀವನವಿಲ್ಲ! ಪಟ್ಟೆ ಹುಳುಗಳೂ ಇಂಥವೇ. ಈ ಜಾತಿಯ ಹುಳುಗಳೇ ನಮಗೆ ಬೆಲೆಬಾಳುವ ಪಟ್ಟೆಯನ್ನು ಕೊಡುತ್ತವೆ.



# ಕೂಡಿಬರೋದಿಲ್ಲ!

ಒಂದು ಊರಿನಲ್ಲಿ ಒಬ್ಬ ಧನಿಕನಿದ್ದ. ಅವನಿಗೊಬ್ಬ ಮಗ. ಆತನಿಗೆ ಮದುವೆಯ ವಯಸ್ಸು ಬಂತು. ಅವನು ಸುಂದರಿಯಾದ ಹುಡುಗಿಯನ್ನಲ್ಲದೆ ಮಾಡಿಕೊಳ್ಳಲಾರೆ ಎಂದ. ಆದುದರಿಂದ ಧನಿಕ ಅನೇಕ ಗ್ರಾಮಗಳನ್ನು ಸುತ್ತಿ ಮುತ್ತಿನಂತಹ ಹೆಣ್ಣನ್ನು ನೋಡಿ ಮದುವೆ ನಿಶ್ಚಯ ಮಾಡಿ ಬೇಗದಲ್ಲೇ ಒಂದು ಮುಹೂರ್ತವಿಟ್ಟು ಬಂದ. ಮದುವೆ ಪ್ರಯತ್ನ ಜೋರಾಗಿ ನಡೆಯುತಿತ್ತು.

ನಾಳೆ ಮದುವೆಗೆ ಹೊರಡುತ್ತಾರೆನ್ನುವಾಗ ಧನಿಕನ ಪುರೋಹಿತನಿಗೆ ಈ ಸುದ್ದಿ ತಿಳಿಯಿತು. ಆತ ಬಂದು "ಮಗನಿಗೆ ಮದುವೆಯೆ? ಮುಹೂರ್ತ ಯಾವಾಗ?" ಎಂದ.

"ನಾಳೆ ರಾತ್ರಿಯೇ. ಒಳ್ಳೆ ಮುಹೂರ್ತವೋ ನೋಡಿ" ಎಂದ ಧನಿಕ.

'ಮುಹೂರ್ತವಿಟ್ಟಮೇಲೆ ಕೇಳುತ್ತಾನಲ್ಲ' ಎಂದು ಪುರೋಹಿತನಿಗೆ ಸಿಟ್ಟು ಬಂತು. "ಯಾರಿಟ್ಟರೀ ಮುಹೂರ್ತ? ಇದು ಕೂಡಿಬರೋದಿಲ್ಲ" ಎಂದ ಪುರೋಹಿತ.

ಧನಿಕನಿಗೆ ಭಯವಾಯಿತು. ಆಗಲೇ ಆತ ಆ ಪುರೋಹಿತನಿಂದ ಇನ್ನೊಂದು ಮುಹೂರ್ತವನ್ನು ನಾಲ್ಕು ದಿನಗಳಮೇಲೆ ಏರ್ಪಾಡುಮಾಡಿ ಪ್ರಯಾಣ ನಿಲ್ಲಿಸಿದ.

ಅಲ್ಲಿ ಹೆಣ್ಣಿನ ಮನೆಯವರು ಸಾಯಂಕಾಲದವರೆಗೆ ನೋಡಿ, ಗಂಡಿನಕಡೆಯವರು ಬಾರದ್ದರಿಂದ, ಕೂಡಲೇ ಊರೊಳಗಿನ ವರನೊಬ್ಬನನ್ನು ಗೊತ್ತುಮಾಡಿ ಮದುವೆ ಮುಗಿಸಿಯೇ ಬಿಟ್ಟರು. ಈ ಸುದ್ದಿ ನಾಲ್ಕು ದಿನಗಳಮೇಲೆ ಧನಿಕನಿಗೆ ತಿಳಿಯಿತು.

ಆತ ಪುರೋಹಿತನನ್ನು ಕರೆದು—"ಇದೇನಯ್ಯಾ, ನಿನ್ನ ಮಾತು ಕೇಳಿ, ಮುತ್ತಿನಂತಹ ಹುಡುಗಿ ಹೋಯಿತಲ್ಲಾ!" ಎಂದ.

"ಅದೇತಾನೇ ನಾನು ಹೇಳಿದ್ದು. ಆ ಹುಡುಗಿ ನಿಮಗೆ ಕೂಡಿಬರೋದಿಲ್ಲಾಂದೆನಲ್ಲಾ! ಬಂತೆ?" ಎಂದು ತಿರುಗಿ ಕೇಳಿದ ಪುರೋಹಿತ.





# ಇಂದ್ರಜಾಲ

ಪ್ರೊಫೆಸರ್ ಪಿ. ಸಿ. ಸರ್ಕಾರ್

ಈಗ ವಿವರಿಸಲಿರುವುದನ್ನು ಐಂದ್ರಜಾಲಿಕರು "ಚೀನಾ ನಾಣ್ಯಗಳ ಇಂದ್ರಜಾಲ" ಎನ್ನುತ್ತಾರೆ. ಹಳೆಯ ಕಾಲದ ಚೀನಾ ನಾಣ್ಯಗಳ ನಡುವೆ ರಂಧ್ರಗಳಿರುತ್ತಿದ್ದುವು. ಆದುದರಿಂದ ಐಂದ್ರಜಾಲಿಕರು ಈ ಆಟ ಮಾಡಲಿಕ್ಕೆ ಆ ನಾಣ್ಯಗಳನ್ನು ಉಪಯೋಗಿಸುತ್ತಿದ್ದರು. ಈಗ ನಮ್ಮದೇಶದಲ್ಲಿ ಕೂಡಾ ರಂಧ್ರವುಳ್ಳ ಕಾಲಾಣೆಗಳಿರುವುದರಿಂದ ನಾವೂ ಈ ಟ್ರಿಕ್ಕನ್ನು "ಓಟೇ ಕಾಸಿನ ಇಂದ್ರಜಾಲ" ಎಂದು ಹೆಸರಿಟ್ಟು ಕರೆಯಬಹುದು.

ಐಂದ್ರಜಾಲಿಕನು ಐದು ಓಟೆಕಾಸುಗಳನ್ನೂ, ಒಂದು ನೀಳವಾದ ದಾರವನ್ನೂ ತೆಗೆದುಕೊಳ್ಳುತ್ತಾನೆ. (ಮೇಲಿನ ಚಿತ್ರ ನೋಡಿ) ಅವುಗಳ ಕೊನೆಗಳನ್ನು ಸೇರಿಸಿ ದಾರವನ್ನು ಎರಡೆಳೆಯಾಗಿ ಮಾಡಿ, ಆ ದಾರದ ಕೊನೆಗಳನ್ನು ಒಂದು ಕಾಲಾಣೆ ರಂಧ್ರದಲ್ಲಿ ತೂರಿಸಿ, ಮಡಿಕೆಯ ಭಾಗದಲ್ಲಿ ಹೊರಗೆಳೆದು, ಕಾಲಾಣೆಯನ್ನು ದಾರದಿಂದ ಬಿಗಿದುಬಿಡುತ್ತಾನೆ. ಬಳಿಕ ಆ ದಾರದ ಕೊನೆಗಳನ್ನು ಮಿಕ್ಕ ನಾಲ್ಕು ಕಾಲಾಣೆಗಳ ರಂಧ್ರಗಳಲ್ಲಿ ಹೊಗಿಸಿ ದಾರದ ಎರಡು ಕೊನೆಗಳನ್ನು ಬೇರೆಬೇರೆ ಎಳೆದುಕೊಂಡು ಬೇರೆಬೇರೆ ವ್ಯಕ್ತಿಗಳಿಗೆ ಕೊಟ್ಟು, ಎಳೆದು ಹಿಡಿಯುವಂತೆ ಹೇಳುತ್ತಾನೆ. (ಮೇಲಿನ ಚಿತ್ರ ನೋಡಿ) ಅವರು ಹಾಗೆ ಹಿಡಿದಿರುವಾಗಲೇ ಐಂದ್ರಜಾಲಿಕನು ಕಾಲಾಣೆಗಳನ್ನು ಬೇರ್ಪಡಿಸಿಬಿಡುತ್ತಾನೆ.

ಇದು ಪ್ರೇಕ್ಷಕರಿಗೆ ಅಸಂಭವವಾಗಿ ತೋರುತ್ತದೆ. ಮೇಲಿರುವ ನಾಲ್ಕು ಕಾಲಾಣೆಗಳೂ ಅಡಿಯಲ್ಲಿರುವ ನಾಣ್ಯದಲ್ಲಿ ಜಾರು

ವಂತಿಲ್ಲ. ಆದರೆ ಇದು ಬಲು ಸುಲಭ. ಕೆಳಗಿನ ಚಿತ್ರ ನೋಡಿದರೆ ಸಾಕು. ಇದರ ಗುಟ್ಟು ಸ್ಪಷ್ಟವಾಗಿ ಅರ್ಥವಾಗುತ್ತದೆ. ನಾಣ್ಯಗಳ ಮೇಲೆ ಕರವಸ್ತ್ರ ಮುಚ್ಚಿ ಗಳೂ ಹೊರಗೆ ಬಂದುಬಿಡುತ್ತವೆ. ತರುವಾಯ ಐಂದ್ರಜಾಲಿಕನು ಕೆಳಗಿನ ನಾಣ್ಯವನ್ನು ಮೊದಲಿನಂತೆಯೇ ದಾರಕ್ಕೆ ಸಿಕ್ಕಿಸಿಬಿಡುತ್ತಾನೆ.







ದಾಗಲೇ ಕೆಳಗಿನ ನಾಣ್ಯಕ್ಕೆ ಕಟ್ಟಿದ ದಾರವನ್ನು ಬಿಡಿಸಿ ಸುಲಭವಾಗಿ ನಾಣ್ಯಗಳನ್ನು ಬರಿಸಿಬಿಡುತ್ತಾನೆ. ಕೆಳಗಿನ ನಾಣ್ಯವೊಂದು ದಾರದಿಂದ ಕಿತ್ತುಬರುತ್ತಲೇ ಮಿಕ್ಕವು

[ಪಾಠಕರಿಗೆ ಈ ಗಾರುಡಿಯನ್ನು ಕುರಿತು ಇನ್ನೇನಾದರೂ ಸಲಹೆ ಬೇಕಾದರೆ, ಇಂಗ್ಲೀಷಿನಲ್ಲಿ ಬರೆಯಿರಿ: ಪ್ರೊಫೆಸರ್, ಪಿ. ಸಿ. ಸರ್ಕಾರ್, ಮೆಜಿಷಿಯನ್, P. O. ಬಾಲೀಗಂಜ್, ಕಲಕತ್ತಾ-19.]



# ವಾರ್ತೆಗಳು-ವಿಶೇಷಗಳು

**ಮ**ಹಾಪ್ರಧಾನಿ ಪಂಡಿತನೆಹರುಗಳ ಜನ್ಮ ದಿನೋತ್ಸವವು ಜಾಗತಿಕ ಬಾಲದಿನೋತ್ಸವವಾಗಿ ಪರಿಗಣಿಸಲ್ಪಟ್ಟಿದೆ. ಈ ಜನ್ಮ ದಿನೋತ್ಸವ ಕಾಣಿಕೆಗಳಿಂದ ೧೯೫೨ ರಿಂದ ಈವರೆಗೆ ೨,೯೦೦ ಬಾಲ ಪಾಠಶಾಲೆಗಳನ್ನು ಸ್ಥಾಪಿಸಲಾಗಿದೆ. ಇಷ್ಟೇ ಅಲ್ಲದೆ ೯,೬೧೦ ಎಕರೆ ಸ್ಥಳ, ೨,೩೮,೧೦೭ ರೂಪಾಯಿ ಬೆಲೆ ಬಾಳುವ ಗ್ರಂಥಗಳು, ೯,೫೭,೧೯೪ ರೂಪಾಯಿ ಬೆಲೆಯ ಸಾಮಗ್ರಿಗಳು ಶ್ರೀ ಪ್ರಧಾನಿ ನೆಹರುಗಳಿಗೆ ಸಮರ್ಪಿಸಲ್ಪಟ್ಟಿವೆ. ಕಳೆದ ವರ್ಷದ ಕಾಣಿಕೆಯ ವಿವರ ೫೦ ಲಕ್ಷ ರೂಪಾಯಿ. ಪಾಠಶಾಲೆಗಳ ಬಹುಮಾನ, ಪಾಠಶಾಲೆಗಳನ್ನು ಸ್ಥಾಪಿಸುವ ವಾಗ್ದಾನ, ಸ್ಥಳ ಬಹುಮಾನ, ಗ್ರಂಥಗಳ, ಗ್ರಂಥಾಲಯ ಪರಿಕರಣಗಳ ಬಹುಮಾನ ಇವು ಈ ಉತ್ಸವದಲ್ಲಿ ಸರ್ವಸಾಧಾರಣ ವಿಷಯವಾಗಿವೆ. ಕಳೆದ ನವಂಬರ್ ೧೪ ರಲ್ಲಿ ಬಾಲಕರೆಲ್ಲಾ ಅವರ ಜನ್ಮ ದಿನೋತ್ಸವವನ್ನು ಆಚರಿಸಿದ್ದಾರೆ.

*　　*　　*

**ಭಾ**ರತದಲ್ಲಿ ಮೊದಲನೇ ಬಾರಿ ಹೌರಾ-ಢಿಲ್ಲೀ ಜನತಾ ಎಕ್ಸ್‌ಪ್ರೆಸ್ ಬಂಡಿಗಳಲ್ಲಿ ನವಂಬರ್ ತಿಂಗಳಿಂದ ಸಿನಿಮಾ ಚಿತ್ರ ತೋರಿಸುವ ಏರ್ಪಾಡಾಗಿದೆ. ಈ ಚಿತ್ರ ಪ್ರದರ್ಶನ ವಿಭಾಗದಲ್ಲಿ ಚಿತ್ರಪ್ರದರ್ಶನವಿಲ್ಲದಾಗ ಚಹಾ, ಕಾಫೀ, ಫಲಾಹಾರ ಮೊದಲಾದುವನ್ನು ಸುಲಭ ಬೆಲೆಗೆ ಮಾರಲಾಗುವುದು. ಈ ಸಿನಿಮಾಕಾರು ಸುಮಾರು ೪೦೦ ಮೈಲು ಮೇರೆಯೊಳಗೆ ನಡೆಯುತ್ತದೆ. ನಾಲ್ಕು ಫಿಲಿಮುಗಳು ಪ್ರದರ್ಶಿಸಲಾಗುತ್ತವೆ. ೬೦ ಮಂದಿ ಪ್ರಯಾಣಿಕರಿಗೆ ಪ್ರದರ್ಶನ ಕಾಣುವ ವಸತಿಯುಂಟು, ಇದಕ್ಕೆ ತಲಾ ೨ ಆಣೆ ವಸೂಲು ಮಾಡುತ್ತಾರೆ. ಇದು ಕೇವಲ ನಾಮಕಾರ್ಥ ಮಾತ್ರ.



ಮಲಯಾ ಯೂನಿವರ್ಸಿಟಿಯ ಪುರಾವಸ್ತು ತತ್ವ ಪರಿಶೋಧನ ಶಾಲೆಯ ಯಾಕ್ಟಿಂಗ್ ಫೀಲ್ಡ್ ಡೈರೆಕ್ಟರ್ ಕೆ. ಜಿ. ಟ್ರೆಗಾನಿಂಗ್ ನಾಯಕತ್ವದಲ್ಲಿ ಪುರಾತನವಸ್ತು ತತ್ವ ಪರಿಶೋಧಕರ ತಂಡವು, ದಕ್ಷಿಣ ಕೆಡಾದ ಮುದಾ ನದಿಯ ಕೆಳಗಿನ ಪ್ರಾಂತದಲ್ಲಿ ಅಗೆಸಿದಾಗ ಪ್ರಾಚೀನಕಾಲದ ಭಾರತೀಯ ಸ್ಥಾವರಗಳು ಆರು ಹೊರಟುವು. ಇವು ಮಹಮ್ಮದೀಯ ಯುಗಕ್ಕೆ ಮೊದಲಿನ ಕ್ರಿ. ಶ ೫೦೦–೧೦೦೦ ವರ್ಷದ್ದು. ೧೯೧೨ ರಲ್ಲಿ ಈ ಪ್ರಾಂತದಲ್ಲೊಂದು ಸ್ವರ್ಣ ದ್ವಾರ ಸಿಕ್ಕಿದೆ. ಚೈನಾ ಮತ್ತು ಭಾರತೀಯರು ಬಳಸಿದ ವಿವಿಧ ವಸ್ತು ವಿಶೇಷಗಳು, ಆಯುಧ ಸಾಮಾನುಗಳು, ಕಲ್ಲಿನ ಪಕಳೆ, ಬಂಗಾರ ಮೊದಲಾದುವು ಇಲ್ಲಿ ಸಿಕ್ಕಬಹುದೆಂದೂ, ಬರುವ ವರ್ಷ ಈ ಸ್ಥಳದಲ್ಲಿ ಅಗೆತ ಪ್ರಾರಂಭಿಸಬೇಕೆಂದೂ ಅವರು ಹೇಳಿದರು. ಭಾರತೀಯರಿಗೆ ಸಂಬಂಧಿಸಿದ ಎರಡು ವಿವಾಹಪೀಠಗಳು ಸಿಕ್ಕಿರುವುದಾಗಿಯೂ, ಅವನ್ನು ಸರಕಾರಕ್ಕೆ ಕೊಡುವುದಾಗಿಯೂ ಅವರು ಹೇಳಿದ್ದಾರೆ.

* * *

ಡೆಹರಾಡೂನಿನಲ್ಲಿರುವ ಅರಣ್ಯ ವಿಜ್ಞಾನ ಪರಿಶೋಧನ ಸಂಸ್ಥೆಯವರು ಸಾಗಿಸಿದ ಪರಿಶೋಧನೆಯ ಫಲಿತವಾಗಿ ನೂರು ಟನ್ನಿನಿಂದ ಸುಮಾರು ೭೦ ಟನ್ನು ಕಾಗದವನ್ನು ಹೆಚ್ಚು ಉತ್ಪತ್ತಿಮಾಡಲಿಕ್ಕೆ ಅವಕಾಶ ಸಿಕ್ಕಿರುತ್ತದೆ. ಇದುವರೆಗೆ ಸುಮಾರು ೬೦ ಟನ್ನು ಕಾಗದ ಮಾತ್ರ ತಯಾರಾಗುತಿತ್ತು.

ಬಿದಿರಿನಿಂದ ಕಡಮೆ ಬೆಲೆಗೆ ತಯಾರಾಗುವ ನ್ಯೂಸ್ ಪ್ರಿಂಟನ್ನು, ಮುದ್ರಣಕ್ಕೆ ಬರುವ ಕಾಗದವನ್ನು ದೊಡ್ಡ ಎತ್ತುಗಡೆಯಲ್ಲಿ ತಯಾರಿಸಲಿಕ್ಕೆ ಬ್ರಿಜ್‌ರಾಜನಗರದ ಓರಿಯಂಟಲ್ ಪೇಪರ್ ಮಿಲ್ಸ್ ಅವರೊಡನೆ ಮಾತುಕತೆಯಾಡಲಾಗಿದೆ ವಾಟಲ್‌ಗೊಜ್ಜಿನಿಂದ ಕಾಗದವನ್ನು ತಯಾರುಮಾಡಲಿಕ್ಕೆ ಭದ್ರಾವತಿಯ ಮೈಸೂರ್ ಪೇಪರ್ ಮಿಲ್ಸ್‌ನವರು ಪ್ರಯೋಗಾರ್ಥ ಕೃಷಿಮಾಡಿದ್ದಾರೆ.

ಕಡಮೆ ಬೆಲೆಯ ಕಾಗದದ ಗಿರಾಕಿ ಹೆಚ್ಚಾದುದರಿಂದ ಈ ಹೊಸ ಪದ್ಧತಿಯನ್ನು ಆಚರಣೆಗೆ ತರಲು ಡೆಹರಾಡೂನ್‌ನಲ್ಲಿ ಒಂದು ಪ್ರಾಜೆಕ್ಟು ಸಂಸ್ಥಾಪಿಸಲಾಗಿದೆ.

* * *

ಐಕ್ಯದೇಶಗಳ ವಿದ್ಯೆ ಮತ್ತು ವಿವಿಧ ಕಲೆಗಳ ವಿಷಯಕವಾದ ಸಮಾವೇಶವು ನ್ಯೂ ಢಿಲ್ಲಿಯಲ್ಲಿ ಮೌಲಾನಾ ಅಬುಲ್‌ಕಲಾಂ ಅಜಾದರ ಅಧ್ಯಕ್ಷತೆಯಲ್ಲಿ ನಡೆಯಿತು. ವಿವಿಧ ದೇಶದ ಪ್ರತಿನಿಧಿಗಳು ಈ ಸಮಾವೇಶದಲ್ಲಿ ಭಾಗವಹಿಸಿದರು.



# ಚಿತ್ರ ಕಥೆ





ಶಾಲೆಯಲ್ಲಿ ವಾರ್ಷಿಕೋತ್ಸವ ಬಂತು. ಅದಕ್ಕಾಗಿ ಚಂದಾ ವಸೂಲುಮಾಡಲು ವಾಸು ಗೋಪಿಯರು ಡಬ್ಬ ತೆಗೆದುಕೊಂಡು ಹೊರಟರು. ಅವರೆಷ್ಟು ಸುತ್ತಿದರೂ ಒಂದು ಕಾಸುಕೂಡಾ ಯಾರೂ ಹಾಕಲಿಲ್ಲ. ಅವರು ಡಬ್ಬವನ್ನೆತ್ತಿ ಬೇಸರದಿಂದ ಬಿಸುಟಾಗ, 'ಟೈಗರ್' ಆ ಡಬ್ಬವನ್ನು ಕಚ್ಚಿಕೊಂಡು ಹೊರಟಿತು. ಅವರು ಸುತ್ತಾಡಿದ ಹಾಗೇ ಅದೂ ಬೀದಿ ಬೀದಿ ಸುತ್ತಾಡಿತು. ಆಗ ಡಬ್ಬಿಯಲ್ಲಿ ತುಂಬಾ ದುಡ್ಡು ಬೀಳತೊಡಗಿತು. ಹಣ ತುಂಬಿದ ಡಬ್ಬಿಯೊಂದಿಗೆ 'ಟೈಗರ್' ಸ್ಕೂಲಿಗೆ ಬಂದಾಗ, ಹೆಡ್ಮಾಷ್ಟರು ಅದರ ಬುದ್ಧಿವಂತಿಕೆಗೆ ಬೆನ್ನು ತಟ್ಟಿದರು. ವಾಸೂ ಗೋಪಿಯರನ್ನು ಲಕ್ಷಿಸಲೇ ಇಲ್ಲ.





Printed by B. NAGI REDDI at the B. N. K. Press (Private) Ltd., and Published by him for Chandamama Publications, from Madras 26—Controlling Editor: SRI 'CHAKRAPANI'

ದಾದಿಯು ಹೇಳುತ್ತಾಳೆ:
ಈ ಆಧುನಿಕ ರೀತಿಯಂತೆ

# "ಶೀತವು ಬೇಗನೇ ಹೋಗುತ್ತದೆ!"

ಎದೆಯಲ್ಲಿನ ನೋವನ್ನು ಹೋಗಲಾಡಿಸಲು ಚರ್ಮದೊಳಗಿಂದ ಕೆಲಸ ಮಾಡುತ್ತದೆ

ಶೀತವನ್ನು 2 ರೀತಿಗಳಲ್ಲಿ ಹೊಡೆದು ಹಾಕುತ್ತದೆ.

ಸುಖವಾಗಿ ಉಸಿರಾಡುವಂತೆ ಮೂಗಿನ ಮೂಲಕ ಕೆಲಸ ಮಾಡುತ್ತದೆ

ನಿಮ್ಮ ಮಗುವಿಗೆ ಶೀತವಾಗಿದ್ದಾಗ ಅವನ ಸಂಕಟಗಳನ್ನು ವಿಕ್ಸ್ ವೇಪೋರಬ್‌ನಿಂದ ಬೇಗನೇ ಪರಿಹಾರ ಮಾಡಬಹುದು. ಈ ಹಿತಕರವಾದ ಮುಲಾಮನ್ನು ಎದೆ, ಗಂಟಲು ಮತ್ತು ಬೆನ್ನಿನ ಮೇಲೆ ಅಷ್ಟು ಉಜ್ಜಿರಿ. ವಿಕ್ಸ್ ವೇಪೋರಬ್‌ನ್ನು ಅನೇಕ ದೇಶಗಳಲ್ಲಿ ದಾದಿಯರು ಮತ್ತು ಡಾಕ್ಟರುಗಳು ಶಿಫಾರಸ್ ಮಾಡುತ್ತಾರೆ, ಏಕೆಂದರೆ, ಅದು :

1. ವಿಕ್ಸ್ ವೇಪೋರಬ್‌ನ್ನು ಮುಲಾಮಿನಂತೆ ಉಜ್ಜಿದರೂ ಸಹ, ಅದು ಬೇರೆ ರೀತಿಯಲ್ಲಿ ಪರಿಹಾರ ತರುತ್ತದೆ. ಈ ಒಳ್ಳೆಯ ಔಷಧಿಯು ಮಗುವಿನ ಎದೆಯೊಳ್ಳಿನ ನೋವನ್ನು ತೆಗೆದು ಹಾಕಲು ಮತ್ತು ಎದೆಕಟ್ಟಿರುವುದನ್ನು ಪರಿಹರಿಸಲು ಚರ್ಮದ ಮೂಲಕ ಕೆಲಸ ಮಾಡುತ್ತದೆ.

2. ನೀವು ಉಜ್ಜಿದ ಮೇಲೆ, ವಿಕ್ಸ್ ವೇಪೋರಬ್, ನಿರ್ಮಲವಾದ ಮತ್ತು ತೀಕ್ಷ್ಣವಾದ ವಾಸನೆಯನ್ನು ಬಿಡುತ್ತದೆ. ಇದನ್ನು ಮಗುವು ಉಸಿರಿನೊಂದಿಗೆ ಎಳೆದುಕೊಳ್ಳುತ್ತದೆ. ಈ ವಾಸನೆಯಿಂದ ಮೂಗು ಕಟ್ಟಿರುವುದು ನಿರ್ಮಲವಾಗುತ್ತದೆ, ಗಂಟಲ ಹುಣ್ಣು ಶಾಂತವಾಗುತ್ತದೆ. ಮತ್ತು ಕೆಮ್ಮು ಶಮನವಾಗುತ್ತದೆ.

**ರಾತ್ರಿಯೆಲ್ಲಾ** ವಿಕ್ಸ್ ವೇಪೋರಬ್, ಮಗುವಿನ ಶೀತವನ್ನು ಈ ಎರಡು ಆಧುನಿಕ ರೀತಿಗಳಲ್ಲಿ ಹೊಡೆದು ಹಾಕಲು ಕೆಲಸ ಮಾಡುತ್ತಿರುತ್ತದೆ. ಬೆಳಗಾಗುತ್ತಲೆ ಸಾಮಾನ್ಯವಾಗಿ ಶೀತದ ಗಡುಸೆಲ್ಲಾ ಹೋಗಿರುತ್ತದೆ.

**ಶೀತಕ್ಕೆ ಅತ್ಯುತ್ತಮವಾದ ಔಷಧಿ**
**"ಅಷ್ಟು ಮಾತ್ರ ಉಜ್ಜಿರಿ!"**

# ವಿಕ್ಸ್ ವೇಪೋರಬ್

"ವಿಕ್ಸ್ ವೇಪೋರಬ್" ಟ್ರೇಡ್ ಮಾರ್ಕ್ ಇರುತ್ತದೆ.

VICKS VAPORUB

AD 322

LIFEBUOY
SOAP

ಆರೋಗ್ಯಶಾಲಿಗಳಾದ ಜನರು ಪ್ರತಿದಿನವೂ

ಲೈಫ್‌ಬಾಯ್‌ಯಿಂದ ಸ್ನಾನ ಮಾಡುತ್ತಾರೆ

—ಅದು ಅನುದಿನದ* ಕೊಳೆಯಲ್ಲಿರುವ
ಕ್ರಿಮಿಗಳನ್ನು ತೊಳೆದುತೆಗೆಯುತ್ತದೆ!




* ಪ್ರತಿದಿನವೂ ಮೈಗೆ ತಗಲುವ ಸಾಮಾನ್ಯ ಕೊಳೆಯಲ್ಲಿರುವ
ಕ್ರಿಮಿಗಳಿಂದ ರೋಗ ತಗಲುವ ಅಪಾಯವು ನಮಗೆಲ್ಲರಿಗೂ ಇದೆ.
ಆದುದರಿಂದಲೇ ಅಷ್ಟು ಅಧಿಕಮಂದಿ ಆರೋಗ್ಯಶಾಲಿ ಜನರು ಯಾವಾಗಲೂ
ಲೈಫ್‌ಬಾಯ್ ಸೋಪಿನಿಂದ ಕೊಳೆಯನ್ನು ಮತ್ತು ಕ್ರಿಮಿಗಳನ್ನು ತೊಳೆದು ತೆಗೆದು ತಮ್ಮ
ಆರೋಗ್ಯರಕ್ಷಣೆ ಮಾಡಿಕೊಳ್ಳುತ್ತಾರೆ — ಲೈಫ್‌ಬಾಯ್ ಸೋಪು ನಿರ್ಮಲತೆ ಕೊಟ್ಟು
ಮನೋಲ್ಲಾಸವನ್ನು ಉಂಟುಮಾಡುತ್ತದೆ!

L. 261-50 KN

ಭಾರತದಲ್ಲಿ ತಯಾರಿಸಲ್ಪಟ್ಟಿದೆ


ನೋಡಿರಿ!
ಅರ್ಧ
ಸನ್‌ಲೈಟ್ ಸೋಪೇ
ಇಷ್ಟೆಲ್ಲಾ ಬಟ್ಟೆಗಳನ್ನು
ಒಗೆದಿದೆ!


ಅದರಲ್ಲಿರುವ ಹೆಚ್ಚಿನ ನೊರೆಯಿಂದಲೇ ಇದು ಸಾಧ್ಯವಾಯಿತು!


SUNLIGHT
SOAP
ಸನ್‌ಲೈಟ್
ಸೋಪು
ಬಟ್ಟೆಗಳನ್ನು ಬೆಳ್ಳಗೆ ಮತ್ತು ಪ್ರಕಾಶಮಾನವಾಗಿ ಒಗೆಯುತ್ತದೆ
S. 242-50 KN

Photo by P. K. Patel



ಬ[illegible]ಮಾನ

ಧನಹೀನನಿಗೆ ಧರಣಿ
ಮುಳ್ಳುಹಾಸಿಗೆ ನೋಡು!

ಕಳಿಸಿದವರು:
ಹೆಚ್. ಸರೋಜ

